# ಆ ವಾ ಹ ನ್



ಪರಮ ಪೂಜನೀಯ ಶ್ರೀ ಗುರೂಜೀಯವರು
೧೯೫೯ರ ಕರ್ನಾಟಕ ಪ್ರಾಂತದ ಪ್ರವಾಸದಲ್ಲಿ
ಮಾಡಿದ ಭಾಷಣಗಳ ಸಂಕಲನ

ಮಕರ ಸಂಕ್ರಮಣ
ವಿಕಾರಿ ಸಂವತ್ಸರ, ಶಕೆ ೧೮೮೧.

ಪ್ರಕಾಶನ ವಿಭಾಗ
ರಾಷ್ಟ್ರೀಯ ಸ್ವಯಂಸೇವಕ ಸಂಘ, ಕರ್ನಾಟಕ.
ಕೇಶವ ಕೃಪಾ,
ಶೇಷಾದ್ರಿಪುರಂ - ಬೆಂಗಳೂರು - ೨೦.

೧೪ - ೧ - ೧೯೬೦



ಬೆಲೆ: ೩೦ ನ. ಪೈ.

ಕೇಸರಿ ಪ್ರೆಸ್
ಬೆಂಗಳೂರು-೧೮.

# ನಮ್ಮ ಮಾತು

---

ಕಳೆದ ನವೆಂಬರ್ ತಿಂಗಳಿನಲ್ಲಿ ಪರಮ ಪೂಜನೀಯ ಶ್ರೀ ಗುರೂಜೀಯವರ ಸಂದರ್ಶನದ ಸೌಭಾಗ್ಯ ಹಾಗೂ ಅವರ ಎರಡು ವಾರಗಳ ಪ್ರವಾಸದ ಪುಣ್ಯ ನಮ್ಮ ಪ್ರಾಂತದ್ದಾಗಿತ್ತು. ಪೂಜನೀಯರ ಶುಭ ಸಮ್ಮುಖದಲ್ಲಿ ನವೆಂಬರ್ ೧೫-೧೬ರಂದು ರಾಯಚೂರು, ೧೮-೧೯ ಸಿರಾ, ೨೧-೨೨ ಮೈಸೂರು, ೨೪-೨೫ ಕಾಸರಗೋಡು ಮತ್ತು ೨೭-೨೮ ಧಾರವಾಡ—ಹೀಗೆ ಐದು ಸ್ಥಾನಗಳಲ್ಲಿ ಸಂಘದ ಸ್ವಯಂಸೇವಕರ ಎರಡೆರಡು ದಿನಗಳ ಶಿಬಿರಗಳು ಯಶಸ್ವಿಯಾಗಿ ನಡೆದವು. ಈ ಎಲ್ಲ ಸ್ಥಾನಗಳಲ್ಲಿಯೂ ಶ್ರೀ ಗುರೂಜೀಯವರು ಸಾರ್ವಜನಿಕ ಸಮಾರಂಭಗಳಲ್ಲಿ ಮತ್ತು ಸ್ವಯಂಸೇವಕರಿಗಾಗಿ ಇದ್ದ ಬೌದ್ಧಿಕ ವರ್ಗಗಳಲ್ಲಿ – ಅವರ ಪಾವನ ಸಂದರ್ಶನದ ಸಲುವಾಗಿ ಹಾಗೂ ಅವರ ಓಜಸ್ವೀ ವಾಣಿಯ ಶ್ರವಣಕ್ಕಾಗಿ ಹಾತೊರೆದು ಸೇರಿದ್ದ ಸಹಸ್ರಾವಧಿ ನಾಗರಿಕರು ಮತ್ತು ಸ್ವಯಂಸೇವಕರನ್ನುದ್ದೇಶಿಸಿ – ಭಾಷಣ ಮಾಡಿದರು. ಆ ಭಾಷಣಗಳ ಮೂಲಕ ಅವರು ಮಾಡಿದ ಆವಾಹನೆಯ ಸಂಕಲಿತ ರೂಪದ ಪ್ರಕಟಣೆ ಈ ಪುಸ್ತಕ.

ಪವಿತ್ರ ಗಂಗಾಧಾರೆ ಸ್ವಗೃಹದ ದ್ವಾರಕ್ಕೆ ಬಂದಾಗ ಅದಕ್ಕೆ ಮೈತಾಗಿಸಲು ಮುಂದಾಗದವರಾರು? ಆಗ ಅವಸರದಲ್ಲಿ ತುಂಬಿಕೊಂಡ ಒಂದೆರಡು ಕೊಡ ಗಂಗಾಮೃತವನ್ನೇ ವಿನೀತಭಾವದಿಂದ ಜನತೆಯ ಅಧೀನಕ್ಕೊಪ್ಪಿಸುವ ಪ್ರಯತ್ನವೇ 'ಆವಾಹನ್'. ಸುತ್ತಲೂ ದೇಶವು ಅಸಂಖ್ಯ ಸಂಕಟಗಳಿಗೆ ಸಿಲುಕಿರುವ ಇಂದಿನ ವಿಪರೀತ ವಿಪತ್ಕಾರಕ ವಾತಾವರಣದಲ್ಲಿ ಹಾಗೂ ಸಮಾಜವು ಸರ್ವರೀತಿಯ ಗುಣಹೀನತೆ

ಗೊಳಗಾಗಿರುವ ಪರಿಸ್ಥಿತಿಯಲ್ಲಿ ಪರಮ ಪೂಜನೀಯ ಶ್ರೀ ಗುರೂಜೀಯ ಮಾರ್ಗದರ್ಶನದ ನಿತಾಂತ ಅವಶ್ಯಕತೆಯನ್ನು ಒತ್ತಿನುಡಿಯುವ ಅ ವಾದರೂ ಏನು?

ಶ್ರೀ ಗುರೂಜೀಯವರ ಹಿಂದಿ ಮತ್ತು ಇಂಗ್ಲಿಷ್ ಭಾಷಣ ಪ್ರಖರ ಪ್ರಕಾಶಕ್ಕೆ ನಮ್ಮ ಮುರುಕು ಕನ್ನಡಿ ಹಿಡಿದು ಕನ್ನಡಿಸಿದ್ದೇ ಕನ್ನಡಿಯ ಕಿರಿತನಕ್ಕೆ ಸಿಲುಕದೆ ಅದೆಷ್ಟೋ ಕಿರಣಗಳು ಇಲ್ಲಿ ಕಾಣದಾ ಬಹುದು. ಪ್ರತಿಫಲನದ ದೋಷಗಳೂ ಇವೆ. ಅವನ್ನೆಲ್ಲ ಮನ್ನಿ ಮೂಲಪ್ರಭೆಯ ಅರಿವನ್ನು ಈ ಮೂಲಕ ಓದುಗರು ಪಡೆಯಬೇಕೆಂಬು ನಮ್ಮ ಪ್ರಾರ್ಥನೆ.

ಬೆಂಗಳೂರು
೧೪–೧–೧೯೬೦

—ಪ್ರಕಾಶಕರು

ಓಂ

ಆವಾಹನ್

# ಜನತೆಗೆ

ಈ ಬಾರಿ ಕರ್ನಾಟಕದ ಐದು ಸ್ಥಾನಗಳಲ್ಲಿ ಎರಡೆರಡು ದಿನಗಳ ಸಂಘದ ಶಿಬಿರಗಳನ್ನು ಏರ್ಪಡಿಸಿದೆ. ಒಂದೊಂದು ಶಿಬಿರದಲ್ಲೂ ಅಕ್ಕಪಕ್ಕದ ಜಿಲ್ಲೆಗಳ ಸ್ವಯಂಸೇವಕರು ಒಂದುಗೂಡಿದ್ದಾರೆ. ಅವರನ್ನು ನೇರವಾಗಿ ಕಂಡು ನಮ್ಮ ಕಾರ್ಯದ ಪ್ರಗತಿಯ ಪ್ರತ್ಯಕ್ಷವರದಿಯನ್ನು ತಿಳಿಯಬೇಕೆಂದು ನಮ್ಮ ಕಾರ್ಯಕರ್ತರ ಯೋಜನೆಯಾಗಿದೆ. ಅದಕ್ಕನುಸಾರವಾಗಿ ನನ್ನ ಪ್ರವಾಸ ಸಹ ಸಾಗಿದೆ.

## ಸ್ವಯಂಪ್ರೇರಣೆ

ಶಿಬಿರಕ್ಕೆ ದೂರದೂರದ ಸ್ಥಾನಗಳಿಂದ ತಮ್ಮ ಸ್ವಂತ ವೆಚ್ಚದಲ್ಲಿ ಸ್ವಯಂಸೇವಕರು ಬಂದಿದ್ದಾರೆ. ತಮ್ಮ ಓದು, ಉದ್ಯೋಗ ಇತ್ಯಾದಿಗಳನ್ನೆಲ್ಲ ಬದಿಗಿರಿಸಿ, ತಮ್ಮದೇ ಹಣದಿಂದ ಗಣವೇಶ ಹೊಂದಿಸಿಕೊಂಡು ಬಂದು ಭಾಗವಹಿಸಿದ್ದಾರೆ. ಶಿಬಿರದಲ್ಲಿನ ಊಟ-ತಿಂಡಿಯ ಖರ್ಚು ಸಹ ಅವರದೇ. ಇಲ್ಲಾದರೋ ಬೆಳಿಗ್ಗೆ ೫ ರಿಂದ ರಾತ್ರಿ ೧೦ರ ವರೆಗೆ ಬಿಡುವಿಲ್ಲದ ಕಾರ್ಯಕ್ರಮಗಳಿರುತ್ತವೆ; ಶಿಬಿರಜೀವನದ ಎಲ್ಲ ಪರಿಶ್ರಮವನ್ನೂ ಅವರು ಸಹಿಸುತ್ತಾರೆ. ಅವರಿಗೆ ಜೇಬು ಖರ್ಚಿನ ಹಣವೂ (Pocket-Money) ಸಿಕ್ಕುವುದಿಲ್ಲ. ಈ ರೀತಿ ಸ್ವಂತ ಧನ, ಸಮಯ ಕೊಟ್ಟು, ಸ್ವಯಂಪ್ರೇರಣೆ

ಯಿಂದ ಕಷ್ಟ ಸಹಿಸಲು ಮುಂದಾಗುವ ಈ ವಿಶೇಷತೆಯನ್ನು ನೀವು 'ಸ
ದಲ್ಲಿ ಮಾತ್ರ ನೋಡಬಲ್ಲಿರಿ. ನಮ್ಮ ಕಾರ್ಯಕ್ಕೆ ಸ್ವಾವಲಂಬನ ಹ
ಸ್ವಶಕ್ತಿಗಳೇ ಆಧಾರ. ಕಾರಣ, ರಾಷ್ಟ್ರಕಾರ್ಯ ಬೇರೆಯವರಿಂದ ಆಗ
ಸ್ವಂತ ಧನ, ಸಮಯ, ಸ್ವಶಕ್ತಿಗಳನ್ನು ನೀಡಿ ರಾಷ್ಟ್ರಕಾರ್ಯ ಮಾಡು
ತ್ಯಾಗವಂತೂ ಅಲ್ಲ; ಅದಾದರೋ ರಾಷ್ಟ್ರದ ಪ್ರತಿಯೋರ್ವ ಘ
ಕರ್ತವ್ಯವಾಗಿದೆ. ಸಂಘದ ಸ್ವಯಂಸೇವಕರು ಈ ಎಲ್ಲ ಕಷ್ಟಗಳನ್ನು ಸ
ವುದು ಏನೋ ಒಂದು ಉದ್ದೇಶಕ್ಕಾಗಿಯೇ ಇರಬೇಕು. ಆ ಉದ್ದೆ
ವೇನು ಎಂಬುದನ್ನು ಕುರಿತು ಯೋಚಿಸೋಣ.

## ನಮ್ಮ ಗುರಿ - ಶಕ್ತಿಯ ನಿರ್ಮಾಣ

ನಮ್ಮ ಈ ರಾಷ್ಟ್ರೀಯ ಸ್ವಯಂಸೇವಕ ಸಂಘವು ೩೫ ವರ್ಷಗಳ ಹಿ
ನಾಗಪುರದಲ್ಲಿ ಅತ್ಯಂತ ಸಣ್ಣ ಸ್ವರೂಪದಲ್ಲಿ ಪ್ರಾರಂಭವಾಯಿತು. ಕೆ
ಯುವಕರು ಒಟ್ಟಿಗೆ ಸೇರಿದರು; ವಿಚಾರವಿನಿಮಯ ಮಾಡಿದರು. ತ
ಕರ್ತವ್ಯವನ್ನು ನಿಶ್ಚಯಿಸಿ, ಸಣ್ಣ ಶಾಖಾ ರೂಪದಲ್ಲಿ ಕಾರ್ಯ ಪ್ರಾರಂ
ದರು. ಇಂದು ಪ್ರಾಂತ-ಪ್ರಾಂತದಲ್ಲಿ, ನಗರ-ನಗರದಲ್ಲಿ, ಗ್ರಾಮ-ಗ್ರಾ
ದಲ್ಲಿ ಆಸೇತುಹಿಮಾಚಲ ಪರ್ಯಂತ ಸಂಪೂರ್ಣ ಭಾರತವರ್ಷದ
ಸ್ವಯಂಸೇವಕರು ಸೇರುತ್ತಾರೆ. ನಿಶ್ಚಿತ ಸಮಯದಲ್ಲಿ, ನಿಶ್ಚಿತ ಸ್ಥಾನದ
ಪರಮ ಪವಿತ್ರ ಭಗವಾಧ್ವಜದ ಪಾವನ ಛಾಯೆಯಲ್ಲಿ ಸೇರಿ, ಅಂತಃಕರ
ದಲ್ಲಿ ಮಾತೃಭೂಮಿಯ ಬಗ್ಗೆ ಶ್ರದ್ಧೆ ಧರಿಸುತ್ತಾರೆ; ಅದರ ಸೇವೆಗಾ
ಯೋಗ್ಯ ಗುಣಗಳನ್ನು ಆವಾಹಿಸಿಕೊಳ್ಳುತ್ತಾರೆ. ಹೀಗೆ, ಭಾರತದ ಪ್ರಾಚೀ
ವೈಭವದ ಪುನರ್‌ಸ್ಥಾಪನೆಗಾಗಿ ಅಜೇಯ ಶಕ್ತಿ ಗಳಿಸುವ ತಮ್ಮ ಆಕಾಂ
ಯನ್ನು ಪ್ರಾರ್ಥನಾ ರೂಪದಲ್ಲಿ ಏಕಕಂಠದಿಂದ ಉಚ್ಚರಿಸುವ ಲಕ್ಷೋ
ಲಕ್ಷ ಸ್ವಯಂಸೇವಕರು ನಮ್ಮ ಕಣ್ಣಿಗೆ ಬೀಳುತ್ತಾರೆ. ಅವರು ಹಾಗೇ
ಮಾಡುತ್ತಾರೆ? ಅದಕ್ಕೂ ಕಾರಣವಿದೆ. ದಿನನಿತ್ಯ ಒಂದೆಡೆ ಸೇ
ಸಮಾನ ಭಾವನೆ, ಸಮಾನ ಶ್ರದ್ಧೆಯಿಂದ ಸದ್ಗುಣಗಳನ್ನು ಆವಾಹಿ
ಕೊಳ್ಳುತ್ತಾ ಹೋದರೆ, ಸತ್ಸಂಸ್ಕಾರಗಳು ದೃಢಗೊಳ್ಳುತ್ತವೆ;

ಸತ್ಸಂಸ್ಕಾರದಿಂದ ಪ್ರಚಂಡ ಶಕ್ತಿ ನಿರ್ಮಾಣವಾಗುತ್ತದೆ – ಇದು ನಮ್ಮ ಅಚಲ ನಂಬಿಕೆಯಾಗಿದೆ. ನಮ್ಮೆಲ್ಲ ಪರಿಶ್ರಮ ಹಾಗೂ ದೈನಂದಿನ ಕಾರ್ಯಕ್ರಮಗಳ ಉದ್ದೇಶ ಇದೇ – ಶಕ್ತಿಸಂಪಾದನೆ.

## ಶಕ್ತಿಯೇಕೆ ಬೇಕು ?

ನಂತರ ಪ್ರಶ್ನೆಯೇಳುತ್ತದೆ – ಶಕ್ತಿಯೇಕೆ ಬೇಕು ? ಪ್ರಗತಿಯ ಯುಗವೆಂದು ಕರೆಸಿಕೊಳ್ಳುವ ಈ ೨೦ನೆಯ ಶತಮಾನದಲ್ಲೂ ದುರ್ಬಲನಿಗೆ ಸ್ಥಾನವಿಲ್ಲ. ಸದಾಕಾಲವೂ ದುರ್ಬಲನ ಅವಹೇಳನ ನಡೆಯುತ್ತದೆ; ಅವನ ವಿನಾಶಕ್ಕಾಗಿ ಎಲ್ಲೆಲ್ಲೂ ಯೋಜನಾಪೂರ್ವಕ ಪ್ರಯತ್ನಗಳು ನಡೆಯುತ್ತವೆ. ಈ ಬಗ್ಗೆ ನನಗೆ ಹಿಂದಿನದೊಂದು ಸುಭಾಷಿತ ನೆನಪಾಗುತ್ತದೆ. ಯಜ್ಞದಲ್ಲಿ ದೇವತೆಗೆ ಬಲಿ ಕೊಡುವ ಪ್ರಶ್ನೆ ಬಂದಿತು. "ಯಾವುದರ ಬಲಿ ಬೇಕು ? ಕುದುರೆಯೇ, ಆನೆಯೇ ಅಥವಾ ಹುಲಿಯೇ ?" ಎಂದು ಆ ದೇವತೆಯನ್ನೇ ಕೇಳಲಾಯಿತು. ಕಡೆಗೆ ಆಡಿನ ಮರಿ (ಅಜಾ ಪುತ್ರ) ಯನ್ನು ಬಲಿಕೊಡಬೇಕೆಂದು ನಿರ್ಣಯವಾಯಿತು.

"ಅಶ್ವಂ ನೈವ ಗಜಂ ನೈವ ವ್ಯಾಘ್ರಂ ನೈವ ಚ ನೈವ ಚ।
ಅಜಾಪುತ್ರಂ ಬಲಿಂ ದಧ್ಯಾತ್ ದೇವೋ ದುರ್ಬಲ ಘಾತಕಃ॥"

ಈ ರೀತಿ,ದುರ್ಬಲನನ್ನು ಯಾರೂ ಲೆಕ್ಕಿಸುವುದಿಲ್ಲವೆಂಬುದು ದಿನನಿತ್ಯದ ಅನುಭವವಾಗಿದೆ. ಒಂದು ಸಹಸ್ರ ವರ್ಷಗಳಿಂದ ದುರ್ಬಲವಾಗಿರುವ ಈ ಹಿಂದೂ ಸಮಾಜಕ್ಕೆ ಸಹ ಎಲ್ಲೂ ಸನ್ಮಾನವಿಲ್ಲ. ಆಗಿಂದಾಗ್ಗೆ ಅದರ ಮೇಲೆ ಆಘಾತಗಳಾಗುತ್ತಲೇ ಇವೆ; ಹಿಂದೂ ಮಂದಿರಗಳು ಮುರಿದು ಬಿದ್ದವು, ಅದರ ಸಂಪತ್ತನ್ನು ಅಪಹರಿಸಲಾಯಿತು; ಹಿಂದೂ ಮಾತೆ, ಭಗಿನಿಯರ ಮಾನಭಂಗವಾಯಿತು; ಹಿಂದುಗಳ ವಿವಾಹ ಸಂಸ್ಕಾರದಲ್ಲೂ ಹಸ್ತಕ್ಷೇಪ ಮಾಡಲಾಗಿದೆ; ಅವರ ಪೈತೃಕ ಸಂಪತ್ತಿನ ಉತ್ತರಾಧಿಕಾರಕ್ಕಾಗಿ ಕಾನೂನುಗಳು ಮಾಡಲ್ಪಟ್ಟಿವೆ; ಹೀಗೆ ಸರ್ವವಿಧದಲ್ಲಿಯೂ ಹಿಂದೂ ಸಮಾಜವನ್ನು ಉಧ್ವಸ್ತಗೊಳಿಸುವ ಪ್ರಯತ್ನಗಳು ನಡೆಯುತ್ತಲೇ ಇವೆ.

## ಶಕ್ತಿಯಿದ್ದಲ್ಲಿ ಸನ್ಮಾನ

ಆದರೆ ಶಕ್ತಿಶಾಲಿಯಾದ ಸಮಾಜದೊಡನೆ ಧ್ವನಿ ತಗ್ಗಿಸಿ ಮಾತನ
ತ್ತಾರೆ. ಯಾರೂ ಅವರನ್ನು ಕೆಣಕುವ ಸಾಹಸ ಮಾಡುವುದಿಲ್ಲ. ಅ
ಸನ್ಮಾನ ಸಿಗುತ್ತದೆ; ಅವರ ಆದರ, ಸತ್ಕಾರ ನಡೆಯುತ್ತದೆ. ಉದಾಹ
ಮುಸ್ಲಿಂ ಲೀಗ್ ತೆಗೆದುಕೊಳ್ಳೋಣ. ಹಿಂದೂ ತತ್ವಜ್ಞಾನವು ಯಾರ
ಯಾವುದನ್ನೂ ದ್ವೇಷಿಸದಷ್ಟು ವಿಶಾಲವಾಗಿದೆ. ಇದರಲ್ಲಿ ಹೊರಕ್ಕೆ ಪ
ವಿರೋಧವಾಗಿ ಕಾಣುವ ಭಿನ್ನ ಭಿನ್ನ ಉಪಾಸನಾ ಪದ್ಧತಿಗಳು ಇಂ
ಇವೆ. ಆದರೆ ದುರ್ಭಾಗ್ಯದಿಂದ ಲೀಗಿನಕಾರ್ಯ ಕೇವಲ ಧಾರ್ಮಿಕ ಉ
ವಾಗಿರಲಿಲ್ಲ. ಈ ಭೂಮಿಯಲ್ಲಿ ಸ್ವತಂತ್ರ ಪ್ರಭುತ್ವವುಳ್ಳ ಮುಸ್ಲಿಂ
ವನ್ನು ಸ್ಥಾಪಿಸುವುದೇ ಅದರ ಗುರಿಯಾಗಿತ್ತು. ಯಾವ ಉದ್ದೇಶಕ
ಲೀಗಿನ ಕಾರ್ಯ ಪ್ರಾರಂಭವಾಯಿತೋ, ಅದರ ಫಲವೇ ದೇಶ ವಿಭಜ
ಆ ವಿದೇಶೀ ರಾಷ್ಟ್ರವಾದದೆದುರು ನಮ್ಮ ದೊಡ್ಡ ದೊಡ್ಡ ನಾಯಕರು
ತಗ್ಗಿಸಿದರು. ಅವರ ಶಿಷ್ಟತೆ, ಪ್ರತಿಭೆಗಳನ್ನು ಹೊಗಳಲಾರಂಭಿಸಿದ
ನಡೆದದ್ದು ವಿಭಜನೆಯಲ್ಲ, ಅಣ್ಣ ತಮ್ಮಂದಿರ ಪಾಲುಗಾರಿಕೆ ಎಂದು
ತೊಡಗಿದರು. ಹೀಗೆ ಮುಸಲ್ಮಾನರು ಶತ್ರುತ್ವ ತೋರಿದರೂ ಅದ
ಹಿರಿಯ ನಾಯಕರು ಅವರ ಮುಂದೆ ನತಮಸ್ತಕರಾದರು ! ಆತ್ಮಘಾ
ವಾದ ಈ ದೈನ್ಯಭಾವವು ದುರ್ಬಲತೆಯ ವಿಷಫಲವೇ ಆಗಿದೆ.

## ದುರ್ಬಲತೆ ಘೋರ ಪಾಪ

ನಮ್ಮ ದುರ್ಬಲತೆಯಿಂದಲೇ ಈಗ ಉತ್ತರದ ಗಡಿಗಳಲ್ಲಿ ಚೀ
ಆಕ್ರಮಣ ನಡೆಸಿದೆ. ಚೀನಾ ಶಕ್ತಿಶಾಲಿಯಾದುದರಿಂದಲೇ ಅಲ್ಲವೇ, ನಾ
ಅವರೆದುರು ತಲೆಬಾಗುತ್ತಿರುವುದು? ಅದರ ಶಕ್ತಿಗೆ ಅಂಜಿ 'ಹಿಂದ
ಚೀನೀ ಭಾಯಿ-ಭಾಯಿ' ಎಂಬ ಹುಚ್ಚು ಘೋಷಣೆ ಕೂಗಲಿಲ್ಲ
ದುರ್ಬಲತೆಯಿಂದಲೇ ನಾವು ಟಿಬೆಟಿನ ಮೇಲೆ ಚೀನಾದ ಅಧಿಕಾರವ
ಒಪ್ಪಿಕೊಳ್ಳಲಿಲ್ಲವೆ? ಈ ದುರ್ಬಲತೆ ಹಾಗೂ ಭೀತಿಯಿಂದ ನ
ನಾಯಕರು ಐದು ವರ್ಷಗಳಿಂದ ಚೀನಾ ನಡೆಸಿದ ಆಕ್ರಮಣಗಳ

ಬಾಯಿ ಸಹ ಬಿಡಲಿಲ್ಲ. ಇದರಿಂದ ಸ್ಪಷ್ಟವಾಗಿ ಗೊತ್ತಾಗುತ್ತದೆ–ಬಲಶಾಲಿಗೇ ಜನ ಸಂಪೂರ್ಣ ಬಾಗುತ್ತಾರೆ; ಆತನಿಗೆ ಅಧಿಕಾರ ಇರಲಿ, ಬಿಡಲಿ, ಅವನಿಗಾಗಿ ಎಲ್ಲ ಅನುಕೂಲತೆಗಳನ್ನೂ ಸಿದ್ಧಪಡಿಸುತ್ತಾರೆ. ಆದರೆ ದುರ್ಬಲನನ್ನು ಹೆಚ್ಚು ಹೆಚ್ಚು ವಿನಾಶಮಾಡಲು ಪ್ರಯತ್ನಿಸುತ್ತಾರೆ. ಆದ್ದರಿಂದ ದುರ್ಬಲತೆ ಒಂದು ಘೋರ ಪಾಪವಾಗಿದೆ. ದುರ್ಬಲನಾಗಿರುವುದೆಂದರೆ ಆಕ್ರಮಣಕ್ಕೆ ಆಮಂತ್ರಣವಿತ್ತಂತೆಯೇ ಸರಿ! ಆದ್ದರಿಂದ ಶಕ್ತಿಯ ನಿರ್ಮಾಣ ನಮಗೆ ಇಂದು ಅತ್ಯಂತ ಅಗತ್ಯವಾಗಿದೆ. ಕೆಲವರಂತೂ ವಿಶ್ವ-ರಾಜ್ಯ (World-State) ದ ವಿಚಾರ ಮಾತನಾಡುತ್ತಾರೆ. 'ವಸುಧೈವ ಕುಟುಂಬಕಮ್' ಎಂದು ಹೇಳುವುದಂತೂ ಬಹು ಸುಲಭ; ಆದರೆ ಯಾರ ಕೈಯಲ್ಲಿ ಬಲಸಂಪನ್ನ, ಶಕ್ತಿಸಂಪನ್ನನಾದ ಶ್ರೀ ಕೃಷ್ಣನ ಸುದರ್ಶನ ಚಕ್ರ ವಿದೆಯೋ, ಅವನೇ 'ವಸುಧೈವ ಕುಟುಂಬ'ದ ಮಾತನ್ನೆತ್ತಲು ಯೋಗ್ಯನೆಂದು ನಾವು ತಿಳಿದಿರಬೇಕು.

## ಶಕ್ತಿನಿರ್ಮಾಣ ಏಕಮೇವ ಮಾರ್ಗ

ಶಕ್ತಿನಿರ್ಮಾಣವು ಅನಿವಾರ್ಯ ಹಾಗೂ ನಿತಾಂತ ಅವಶ್ಯಕತೆಯಾಗಿದೆ, ನಿಜ. ಆದರೆ ಅದಕ್ಕಿರುವ ಸಫಲಮಾರ್ಗ ಒಂದೇ. ದಿನಂಪ್ರತಿ ಸತ್ಸಂಸ್ಕಾರಗಳ ಆವಾಹನೆ ಮಾಡಿ, ಒಂದು ಸೂತ್ರಬದ್ಧ, ಸ್ನೇಹಸಂಪನ್ನ ಜೀವನವನ್ನು ನಮ್ಮಲ್ಲಿ ನಿರ್ಮಿಸುವುದೇ ಆ ಏಕಮೇವ ಮಾರ್ಗ. ಇದನ್ನು ಬಿಟ್ಟು ಬೇರೆ ದಾರಿಯೇ ಇಲ್ಲ. ಅದರಿಂದಾಗಿಯೇ ಶಕ್ತಿನಿರ್ಮಾಣಕ್ಕಾಗಿ ದೈನಂದಿನ ಶಾಖಾರೂಪದಲ್ಲಿ ನಮ್ಮ ಪ್ರಯತ್ನ ನಡೆದಿದೆ.

## ಯಾರ ಸಂಘಟನೆ ?

ಕೂಡಲೇ ಪ್ರಶ್ನೆಯೇಳುತ್ತದೆ: ಯಾರ ಶಕ್ತಿ? ಈ ಶಾಖೆಗಳೆಲ್ಲ ಯಾರಿಗಾಗಿ? ಯಾರ ಜೀವನವನ್ನು ಸಂಘಟಿತಗೊಳಿಸಿ, ಸಾಮರ್ಥ್ಯವನ್ನು ತುಂಬಲು ರಾಷ್ಟ್ರೀಯ ಸ್ವಯಂಸೇವಕ ಸಂಘ ಇಷ್ಟೆಲ್ಲ ಪ್ರಯತ್ನ ನಡೆಸುತ್ತಿದೆ? ಇದರ ಉತ್ತರ ಸಹ ಅತೀವ ಸರಳವಾಗಿದೆ. ನಮ್ಮ ಹಿಂದೂ ಸಮಾಜವನ್ನು

ಸುಸಂಘಟಿತಗೊಳಿಸಿ, ಅಜೇಯ ಶಕ್ತಿಶಾಲಿಯನ್ನಾಗಿ ಮಾಡುವುದೇ ಉದ್ದೇಶ. ನಾನು ಹಿಂದೆ ಹೇಳಿದಂಥ ಸಂಕಟಗಳು ದಿನಪ್ರತಿದಿನ ಹೆಚ್ಚಾಗಿ ಬೆಳೆಯುತ್ತಿವೆ. ಗುಪ್ತರೂಪದಲ್ಲಿದ್ದ ಅಪಾಯಗಳು ವ್ಯಕ್ತಗೊ ದೇಶದಾದ್ಯಂತ ಹರಡಿಕೊಳ್ಳುವ ಪ್ರಯತ್ನ ನಡೆಸುತ್ತಿವೆ. ಇಂಥ ಸ ಗ್ರಸ್ತ ಪರಿಸ್ಥಿತಿಯಲ್ಲಿ ದುರ್ಬಲ ಹಿಂದೂ ಸಮಾಜ ಎಲ್ಲ ಅಪಾಯಗ ಆಹಾರವಾಗಿದೆ. ಆದ್ದರಿಂದ ನಮ್ಮ ಸಮಾಜವನ್ನು ಉಳಿಸಿ, ಉದ ಸಂರಕ್ಷಿಸಬೇಕಾದರೆ, ಮೇಲೆತ್ತಿ ನಿಲ್ಲಿಸಬೇಕಾದರೆ, ಸ್ವಸಾಮರ್ಥ್ಯ ಬಿಟ್ಟು ಬೇರೆ ಆಸೆಯಾಗಲೀ, ಆಸರೆಯಾಗಲೀ ಇಲ್ಲ.

## ಆತ್ಮಹೀನಾಯತೆ

ಇಂದು ದುರ್ದೈವದಿಂದ ನಮ್ಮದೇ ಭೂಮಿಯಲ್ಲಿ ನಮಗೇ ಸ್ಥಾ ದಂತಾಗಿದೆ. ನಮ್ಮ ಧರ್ಮ, ಸಂಸ್ಕೃತಿಗಳನ್ನು ನಿಷೇಧಿಸಿ ಯಾರೇ ಅಪಮ ಅವಹೇಳನ ಮಾಡಲಿ, ನಮ್ಮ ಮೇಲೆ ಆಘಾತ ನಡೆಸಲಿ, ಅವರ ವಿ ಒಂದೇ ಒಂದು ಅಕ್ಷರ ಸಹ ನುಡಿಯುವ ಸಾಹಸ ಇಲ್ಲ. ನಮ್ಮದೇ ನಮಗೆ ಪರಕೀಯವಾಗಿರುವಂತಿದೆ. 'ಹಿಂದು' ಎಂದು ಹೇಳುವ ಲಜ್ಜಾಸ್ಪದ ಸಂಗತಿಯಾಗಿದೆ. ನಾವು 'ಹಿಂದು' ಎಂದು ಹೇಳಿಕೊಂ ಎಲ್ಲಿ ಪಕ್ಕದ ಮನುಷ್ಯ ಕೋಪಗೊಳ್ಳುತ್ತಾನೆಯೋ, ಎಲ್ಲಿ ಆ ಅಸಮಾಧಾನ, ಕ್ರೋಧ ಉಂಟಾದೀತೋ ಎಂದು ಹಿಂದೆಮುಂದೆ ನೊ ತ್ತೇವೆ.

## ನಾಯಕರ ವಿಕೃತಿ

ನಮ್ಮ ದೇಶದಲ್ಲಿ ಓರ್ವ ಬಹುದೊಡ್ಡ ನಾಯಕರಿದ್ದಾರೆ. ನಾನು ಅ ಹೆಸರು ಹೇಳುವುದಿಲ್ಲ. ಅಂತೂ ಈಶ್ವರನ ಕೃಪೆಯಿಂದ ಜೀವಂತರಿದಾ ಆಡಳಿತದಲ್ಲಿ ಪೂರ್ಣ ಕೈವಾಡವುಳ್ಳ ಅತ್ಯಂತ ಸನ್ಮಾನ್ಯ ಪುರುಷರು ಅವ ಒಮ್ಮೆ ಅವರೊಡನೆ ಸಂಭಾಷಿಸುತ್ತಿದ್ದಾಗ, "ನೀವು ಹಿಂದೂ ಸಮಾ ಸಂಘಟನೆ ಮಾಡುತ್ತೇವೆನ್ನುತ್ತೀರಿ. ನಮ್ಮ ದೇಶದಲ್ಲಿ ಮುಸ್ಲಿಮರಿದ್ದಾ ಕ್ರಿಶ್ಚಿಯನರಿದ್ದಾರೆ; ಹಿಂದೂರಾಷ್ಟ್ರ ಎಂದು ಹೇಳಿದರೆ ಅವರು ಕೊ

ೊಳ್ಳುತ್ತಾರೆ. ಅದರಿಂದ ಅವರೇನಾದರೂ ವಿದ್ರೋಹ ನಡೆಸಿದರೆ ನಮಗೆ ಹಳ ಕೆಡುಕಾಗುತ್ತದೆ. ಆದ್ದರಿಂದ ನಾವು ಹಾಗೆ ಹೇಳಬಾರದು" ಎಂದರು. ುಸಲ್ಮಾನರು, ಕ್ರಿಶ್ಚಿಯನರು ಕ್ರೋಧಗೊಳ್ಳುತ್ತಾರೆ, ವಿದ್ರೋಹ ಹಾಗೂ ಘಾತ ನಡೆಸುತ್ತಾರೆ; ಈ ಭೀತಿಯಿಂದಲೇ ಅವರ ಬಗ್ಗೆ ಭಾಯಿ-ಭಾಯಿ ಂಬ ಘೋಷಣೆ ಕೂಗಲಾಗುತ್ತಿದೆ; ಅಂತಃಕರಣದ ಪ್ರೇಮದಿಂದಲ್ಲ- ಂದೇ ಇದರ ಅರ್ಥ. ಇದೇ ಭೀತಿಯಿಂದಾಗಿಯೇ ಕಳೆದ ಐವತ್ತು ವರ್ಷ ಗಳಿಂದ 'ಹಿಂದು' ಎನ್ನಬಾರದು, ನಿಮ್ಮ ಹಿಂದುತ್ವವನ್ನು ಮರೆಯಿರಿ, ನಿಮ್ಮ ರಾಷ್ಟ್ರೀಯತೆಯನ್ನು ಮರೆಯಿರಿ; ಎಂದೆಲ್ಲ ಹಿಂದುಗಳಿಗೆ ನಾಯಕರು ೋಧಿಸಿದರು. ಇದು ನಮ್ಮ ರಾಷ್ಟ್ರವೇ ಅಲ್ಲವೆಂದು ಉಪದೇಶಿಸಿದರು.

## ನಮ್ಮ ಅಭಾಗಿ ಸಮಾಜ

ಅನ್ಯ ಸಮಾಜಗಳ ನಾಯಕರಾದರೋ ತಮ್ಮ ಸಮಾಜದಲ್ಲಿ ಆಸೆ, ಕಾಂಕ್ಷೆ, ಆತ್ಮವಿಶ್ವಾಸಗಳನ್ನು ತುಂಬುತ್ತಾರೆ; ತಮ್ಮ ಧರ್ಮ, ಸಂಸ್ಕೃತಿ, ರಾಷ್ಟ್ರಗಳ ಬಗ್ಗೆ ಸ್ವಾಭಿಮಾನವನ್ನು ನಿರ್ಮಿಸುತ್ತಾರೆ; ತಮ್ಮ ಸಮಾಜದ ಉತ್ಕರ್ಷಕ್ಕೆ ಬೇಕಾದ ಎಲ್ಲ ಪ್ರಯತ್ನಗಳನ್ನೂ ನಡೆಸುತ್ತಾರೆ. ಆದರೆ ಂದೂ ಸಮಾಜದ ನಾಯಕರು ತಮ್ಮ ಸಮಾಜ, ಧರ್ಮ, ಸಂಸ್ಕೃತಿಗಳ ಂಡನೆ; ಇತಿಹಾಸ ಹಾಗೂ ಪೂರ್ವಜರ ಕೀರ್ತಿಯ ಖಂಡನೆ; ಹಾಗೂ ರಾಷ್ಟ್ರೀಯತ್ವ, ಮಾತೃಭೂಮಿಯ ಭಕ್ತಿ ಮತ್ತು ಮಾತೃಭೂಮಿಯ ಾರಣೆಯ ಖಂಡನೆ ಮಾಡುತ್ತಿದ್ದಾರೆ. ತಮ್ಮ ಸಮಗ್ರ ಸಮಾಜದ ಆತ್ಮ ಶ್ವಾಸವನ್ನು ನಷ್ಟಪಡಿಸಿ, ಅದರ ಸಾಮರ್ಥ್ಯವನ್ನು ಛಿನ್ನವಿಚ್ಛಿನ್ನಗೊಳಿಸಿ ನಮ್ಮ ಸ್ವಂತ ಕೈಗಳಿಂದ ತಮ್ಮದೇ ಸಮಾಜದ ಕತ್ತು ಹಿಚಿಕಿ ಕೊಲ್ಲಲು ಿದ್ಧರಿದ್ದಾರೆ. ಇಷ್ಟೊಂದು ದೌರ್ಭಾಗ್ಯವು ಹಿಂದೂ ಸಮಾಜದ್ದಾಗಿದೆ. ಂಥ ನಾಯಕರನ್ನು ಪಡೆದ ಹಿಂದುಗಳಷ್ಟು ಅಭಾಗಿಗಳು ಜಗತ್ತಿನ ಾನವ ಇತಿಹಾಸದಲ್ಲಿ ಮತ್ತೆಲ್ಲಿಯೂ ದೊರೆಯುವುದಿಲ್ಲ. ತಮ್ಮ ಸಮಾಜದ ುನ್ನತಿಗಾಗಿ ಶ್ರಮಿಸುವವರನ್ನು ಎಲ್ಲ ಸಮಾಜಗಳೂ ಗೌರವಿಸುತ್ತವೆ. ದರೆ ನಮ್ಮ ಸಮಾಜದಲ್ಲಿ ಅಂತಹರನ್ನು ನಿಂದೆಯ ದೃಷ್ಟಿಯಿಂದ ನೋಡ

ಲಾಗುತ್ತದೆ. ಎಷ್ಟೋ ಸಹಸ್ರ ವರ್ಷಗಳಿಂದ ಪರಂಪರಾಗತವಾಗಿ ಬಂ
ಈ ರಾಷ್ಟ್ರದ ಜೀವನವನ್ನು ನೋಡಿ ಯಾರಾದರೂ ಒಬ್ಬ ಹಿಂದು
ನಿಂತು – 'ಇದು ಹಿಂದೂರಾಷ್ಟ್ರ' ಎಂದು ಹೇಳಿದ್ದಾದರೆ ಅದನ್ನು ಕೊ
ವಾರು ಎನ್ನುತ್ತಾರೆ. ಈ ರೀತಿ ಸ್ವಯಂಸಿದ್ಧವಾದ ತನ್ನ
ರಾಷ್ಟ್ರೀಯತ್ವವನ್ನು ಖಂಡಿಸುವ ಪಾಪಿಗಳು ಹಿಂದುಗಳನ್ನು ಬಿಟ್ಟರೆ
ಯಾರೂ ಇಲ್ಲ. ಹೀಗೇಕಾಯಿತು? ನಮಗೆ ಮಾತ್ರ ಇಂಥ ನಾಯ
ಹೇಗೆ ದೊರೆತರು? ಎಂದು ಆಶ್ಚರ್ಯವಾಗಬಹುದು. ನನಗ
ಹೀಗೆನಿಸುತ್ತದೆ: ಕಳೆದ ಒಂದು ಸಹಸ್ರಕ್ಕಿಂತಲೂ ಹೆಚ್ಚು ವರ್ಷಗಳ
ನಾವೇ ನಮ್ಮ ಶತ್ರುಗಳನ್ನು ಕೈಹಿಡಿದು ಕರೆತಂದೆವು, ಅವರೊಡನೆ
ನಮ್ಮದೇ ಸಮಾಜ ಹಾಗೂ ಧರ್ಮಗಳ ಮೇಲೆ ಆಕ್ರಮಣ ನಡೆಸಿ
ಸ್ವತಃ ನಮ್ಮ ರಾಷ್ಟ್ರವನ್ನು ನಷ್ಟಭ್ರಷ್ಟಗೊಳಿಸುವ ಪ್ರಯತ್ನ ನಡೆಸಿ
ಪರಸ್ಪರ ಅಂತಃಕಲಹ ಹಾಗೂ ಕಚ್ಚಾಟಗಳಿಂದ ಛಿನ್ನವಿಚ್ಛಿನ್ನರಾಗಿ ಪರಕೀ
ರೊಡನೆ ಸಹಕರಿಸಿ ಮಹಾ ಪಾತಕ ಮಾಡಿದೆವು; ಆದ್ದರಿಂದ ತಮ
ಸಮಾಜ ಹಾಗೂ ರಾಷ್ಟ್ರದ ವಿನಾಶಕ್ಕೆ ಕಟಿಬದ್ಧರಾಗಿ ನಿಂತಿರುವ ಇಂ
ನಾಯಕರ ಮೂಲಕ ಆ ಘೋರ ಪಾತಕದ ಫಲವನ್ನು ನಾವಿಂದು ಅನು
ಸುತ್ತಿದ್ದೇವೆ. ಇಂದು ದೊಡ್ಡವರೆಂದು ಹೇಳಿಸಿಕೊಳ್ಳುವವರೆಲ್ಲರೂ ನ
ಸಹಸ್ರವರ್ಷಗಳ ಪಾಪದ ಫಲಸ್ವರೂಪರೆಂದೇ ಹೇಳಬೇಕಾಗಿದೆ. ಇದು ದೌ
ಗ್ಯದ ಸಂಗತಿ; ಆದರೂ ಸತ್ಯದ ಸಂಗತಿ. ಹೀಗೆ ಸ್ವಂತದ ಖಂಡನೆ ಮಾಡಿ
ಳ್ಳುವ ಪ್ರವೃತ್ತಿಯಿಂದ, ಹಿಂದೂ ಸಮಾಜವು ವಾಸ್ತವಿಕವಾಗಿ ಈಭೂಮಿ
ಪುತ್ರರೂಪದಲ್ಲಿದ್ದರೂ ಸಹ, ಯಾರೂ ಕೇಳುವವರಿಲ್ಲದ ಗತಿ ಅವ
ಪ್ರಾಪ್ತವಾಯಿತು.

## ಇದು ಹಿಂದೂರಾಷ್ಟ್ರ

ನಾವು ಹಿಂದೂ ಸಮಾಜದಲ್ಲಿ ಜನಿಸಿದ್ದೇವೆ. ಈ ಹಿಂದೂ ಸಮಾ
ನಮ್ಮದು, ಇದರೊಡನೆ ನಮಗೆ ಏಕಾತ್ಮತೆಯ ಸಂಬಂಧವಿದೆ. ನಾ
ಅತ್ಯಂತ ಪ್ರಾಚೀನ ಕಾಲದಿಂದ ಈ ಭೂಮಿಯನ್ನು ಮಾತೃವಿನಂತೆ ಕಂ
ಇದನ್ನು ಪೂಜಿಸುತ್ತಾ, ಇದರ ಪುತ್ರರೂಪದಲ್ಲಿ ಒಂದು ಪಾರಿವಾರಿಕ ಜೀ

ನಡೆಸುತ್ತ ಬಂದಿದ್ದೇವೆ. ಈ ಭೂಮಿಗೆ ಅನೇಕ ಹೆಸರುಗಳಿವೆ. ಪ್ರಾಚೀನ ವಾಙ್ಮಯುಗಳಲ್ಲೊಂದಾದ ವೈದಿಕ ವಾಙ್ಮಯದಲ್ಲಿ ಉಲ್ಲೇಖವಾಗಿರುವ ಪ್ರಸಿದ್ಧ ಭರತ ವಂಶಜರ ಮಾತೃಭೂಮಿಯಾದ್ದರಿಂದ ಇದಕ್ಕೆ ಭಾರತವೆಂದು ಹೆಸರು ಬಂದಿದೆ. ಈ ಭೂಮಿಯ ವಿಸ್ತಾರದ ಕಲ್ಪನೆಯನ್ನು ಸಹ ಪೂರ್ವಜರು ನಮ್ಮ ಮುಂದೆ ಸ್ಪಷ್ಟವಾಗಿ ಇಟ್ಟಿದ್ದಾರೆ. ಉತ್ತರದಲ್ಲಿ ಹಿಮಾಲಯದಿಂದ, ಎಂದರೆ– ಇಂದು ನಮ್ಮಿಂದ ದೂರವಾಗಿ ಟಿಬೆಟ್ ಎನಿಸಿಕೊಳ್ಳುವ ಸಂಪೂರ್ಣ ತ್ರಿವಿಷ್ಟಪ ಮತ್ತು ಕಾಂದಾಹಾರ್, ಅಫ್ಘಾನಿಸ್ಥಾನ್ ಎಂದು ಕರೆಯಲ್ಪಡುವ ಗಾಂಧಾರ ಇತ್ಯಾದಿ ಹಿಮಾಲಯದ ಎಲ್ಲ ಶಾಖೋಪಶಾಖೆಗಳನ್ನೊಳಗೊಂಡ ವಿಸ್ತಾರ ಕ್ಷೇತ್ರದಿಂದ ಹಿಡಿದು, ದಕ್ಷಿಣದಲ್ಲಿ ಅನೇಕ ದ್ವೀಪಸ್ತೋಮಗಳಿಂದ ಸುಶೋಭಿತವಾದ ಮಹಾಸಾಗರದವರೆಗೆ ಹರಡಿರುವ ವಿಶಾಲ ಭೂಭಾಗವನ್ನು ನಾವು ಭಾರತಮಾತೆಯ ರೂಪದಲ್ಲಿ ಕಾಣುತ್ತಾ ಬಂದಿದ್ದೇವೆ. ಇದುವರೆಗೆ ಭಾರತವನ್ನು ಅನೇಕ ವಿಧದಲ್ಲಿ ವಿಭಜಿಸುತ್ತಿದ್ದವರಿಗೂ ಸಹ, ಈಶ್ವರನ ಕೃಪೆ ಯಿಂದ, ಚೀನಾದ ಆಕ್ರಮಣ ನಡೆದ ನಂತರ ಕೆಲವು ದಿನಗಳ ಕೆಳಗೆ ಹಿಮಾಲಯ ನಮ್ಮದೆಂಬ ಸ್ಮರಣೆಯುಂಟಾಗಿದೆ. ನಮ್ಮ ಪ್ರಧಾನಮಂತ್ರಿಗಳು ಆಗ್ರಾ ಸಮೀಪದ ಒಂದು ಸ್ಥಾನದಲ್ಲಿ ಭಾಷಣ ಮಾಡುತ್ತಾ "ಹಿಮಾಲಯ ನಮ್ಮದಾಗಿದೆ. ನಮ್ಮ ನೆತ್ತರಿನೊಂದಿಗೆ ಅದು ಸಮಾವಿಷ್ಟವಾಗಿದೆ" ಎಂದಿದ್ದಾರೆ. ಅಷ್ಟೇ ಅಲ್ಲದೆ, ಚೀನಾದೊಡನೆ ನಡೆದ ಪತ್ರವ್ಯವಹಾರ (ದ್ವಿತೀಯ ಶ್ವೇತಪತ್ರ) ದಲ್ಲಿ ಹಿಮಾಲಯದ ಬಗ್ಗೆ ಇರುವ ಗೌರವಪೂರ್ಣ ವರ್ಣನೆಯನ್ನು ನೋಡಿ – ಪಂ|| ನೆಹರೂರವರು ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಸ್ವಯಂಸೇವಕರಾಗಿ, ನಮ್ಮ ಶಾಖೆಯ ಬೌದ್ಧಿಕ ವರ್ಗದಲ್ಲಿ ಹಿಮಾಲಯವನ್ನು ವರ್ಣಿಸುತ್ತಿರುವಂತೆ ಭಾಸವಾಗುತ್ತದೆ ಹೀಗೆ, ಇತಿಹಾಸದ ಮೂಲಕ ಭಾರತಮಾತೆಯ ಸಂಪೂರ್ಣ ಸುಸ್ಪಷ್ಟ ರೂಪ ಪ್ರಕಟವಾಗುತ್ತದೆ

### ಈ ನೆಲದ ಸತ್ಪುತ್ರ ಹಿಂದು

ಆಕೆಯ ಪುತ್ರರೂಪದಲ್ಲಿ ಮಾನವರ ವಿಶಾಲ ಒಂದು ಸಮೂಹವಿದೆ. ಇಂದು ಈ ಸಮೂಹವನ್ನು ಹಿಂದೂ ಸಮಾಜ ಎನ್ನುತ್ತಾರೆ. ಇದು ಅತ್ಯಂತ

ಪ್ರಾಚೀನ ಕಾಲದಿಂದ ಇಲ್ಲಿ ವಾಸಿಸುತ್ತಿದೆ. ಈ ಸಮಾಜ ಹೊರಗಿನಿ
ದೇಶಕ್ಕೆ ಬಂದಿದೆಯೆಂಬುದಕ್ಕೆ ಯಾವುದೇ ಪ್ರಮಾಣವೂ ಇಲ್ಲ. ಅ
ಪ್ರಾಚೀನ ಕಾಲದಿಂದ, ಇತಿಹಾಸ ಎಲ್ಲಿಯುವರೆಗೆ ಮುಟ್ಟಬಲ್ಲದೋ, ಅ
ಹಿಂದಿನಿಂದ, ಹಿಂದೂ ಸಮಾಜದ ಪೂರ್ವಜರೇ ಇಲ್ಲಿ ವಾಸಿಸುತ್ತಿ
ಅವರಿಂದಲೇ ಈ ದೇಶಕ್ಕೆ ಹಿಂದೂಸ್ಥಾನವೆಂದು ಹೆಸರಾಯಿತು. ಅವರಿ
ಇಲ್ಲಿನ ಭಿನ್ನ ಭಿನ್ನ ಸ್ಥಾನಗಳಿಗೆಲ್ಲಾ ಪಾವಿತ್ರ್ಯತೆ ಪ್ರಾಪ್ತವಾಯಿತು. ಕೈ
ಮಾನಸ-ಸರೋವರ, ಉತ್ತರದಿಂದ ದಕ್ಷಿಣದವರೆಗೆ ಹರಡಿರುವ ಇ
ಜ್ಯೋತಿರ್ಲಿಂಗಗಳು, ತೀರ್ಥಸ್ಥಾನಗಳು ಇತ್ಯಾದಿಗಳೆಲ್ಲವೂ ಆ ಸಮ
ಜೀವನದೊಡನೆ ಅತ್ಯಂತ ಪ್ರಾಚೀನಕಾಲದಿಂದಲೂ ಸಮರಸವಾ
ಆದ್ದರಿಂದ ಹಿಂದೂ ಸಮಾಜವು ಈ ಭೂಮಿಯ ಪುತ್ರನಂತೆ ಜೀವಿಸ
ಎಂದು ನಮಗೆ ತಿಳಿದುಬಂದಿದೆ.

## ವೈಶಿಷ್ಟ್ಯಪೂರ್ಣ ಜೀವನ

ಪುತ್ರರೂಪದಲ್ಲಿರುವ ಈ ಹಿಂದೂ ಸಮಾಜದ ಒಂದು ವೈಶಿ
ಪೂರ್ಣ ಜೀವನ ಸಹ ನಮಗೆ ಕಾಣುತ್ತದೆ. ಈ ಸಮಾಜವು ತನ್ನ ಜೀವನ
ಒಂದು ಲಕ್ಷ್ಯವನ್ನಿಟ್ಟುಕೊಂಡಿದೆ. ಕೆಲವು ದೇಶಗಳಾದರೋ ಜೀವನವ
ಹೆಚ್ಚಿಸುವ ಗುರಿಯನ್ನಿಟ್ಟುಕೊಂಡಿವೆ. ಇನ್ನು ಕೆಲವಕ್ಕೆ ಆರ್ಥಿಕ ಯೋಜನೆ
ಮುಖ್ಯಲಕ್ಷ್ಯವಾಗಿವೆ. ಅಮೆರಿಕಾ, ರಶ್ಯಾ, ಚೀನಾಗಳಂತೆ ಸಾಮ್ರಾ
ನಿರ್ಮಾಣದ ಗುರಿಯನ್ನೇ ಹಿಡಿದು ಹೊರಟಿರುವ ದೇಶಗಳೂ ಇವೆ. ಆ
ಭಾರತಕ್ಕೊಂದು ವಿಶೇಷ ಲಕ್ಷ್ಯವಿದೆ. ಪ್ರತಿಯೊಬ್ಬನೂ ಸೃಷ್ಟಿಯಲ್ಲಡಗಿರ
ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು; ಅದರೊಡನೆ ಚಿರಂ
ಏಕಾತ್ಮತೆಯ ಸಂಬಂಧವನ್ನು ಸ್ಥಾಪಿಸಿಕೊಳ್ಳಬೇಕು. ಇದೇ ಜೀವ
ಸರ್ವಶ್ರೇಷ್ಠ ಲಕ್ಷ್ಯ. ಇದನ್ನು ಮೀರಿದುದು ಯಾವುದೂ ಇಲ್ಲ. ಊ
ತಿಂಡಿ, ಬಟ್ಟೆ-ಬರೆ, ಮನೆ-ಮಠ ಇತ್ಯಾದಿಗಳೂ ಆವಶ್ಯಕ. ಆದರೆ ಅ
ನಿತ್ಯಜೀವನದ ಸರ್ವಸಾಧಾರಣ ಸಂಗತಿಗಳು; ಅಂತಿಮ ಲಕ್ಷ್ಯದ ಪ್ರಾಪ್ತಿಗಾ
ಐಹಿಕ ಜೀವನ ಸಾಗಿಸಲು ಇರುವ ಕೇವಲ ಸಾಧನಗಳು ಅಷ್ಟೆ. ಈ ಅಂತಿ

ಲಕ್ಷ್ಯದ ಪ್ರಾಪ್ತಿಗಾಗಿ ವ್ಯಕ್ತಿ–ವ್ಯಕ್ತಿಯೂ ಪರಿಪೂರ್ಣನಾಗಬೇಕು. ಮನುಷ್ಯ ಇಷ್ಟೊಂದು ಉನ್ನತಮಟ್ಟಕ್ಕೇರಬೇಕಾದರೆ, ಯಾವುದಾದರೊಂದು ಮಾರ್ಗ ಅಗತ್ಯ. ಈಶ್ವರನನ್ನು ಸಮೀಪಿಸಬೇಕಾದಲ್ಲಿ ಏಕಾಗ್ರತೆ, ಪಾವಿತ್ರ್ಯ, ಚಾರಿತ್ರ್ಯ ಇತ್ಯಾದಿ ಗುಣಸಮುಚ್ಚಯ ಹಾಗೂ ಮನಸ್ಸಿನಲ್ಲಿ ದೃಢತೆ ಆವಶ್ಯಕ. ಈ ಆವಶ್ಯಕತೆಗಳ ನಿರ್ಮಾಣಕ್ಕಾಗಿ ಒಂದು ಜೀವನ ಪ್ರಣಾಳಿಯನ್ನು ರೂಪಿಸಲಾಯಿತು. ಅದರ ಮೂಲಕ ಇಲ್ಲಿ ನಮ್ಮದೊಂದು ಅತೀವ ಪವಿತ್ರ ಸಂಸ್ಕೃತಿಧಾರೆ ಪ್ರಚಲಿತವಾಯಿತು. ಭಿನ್ನ ಭಿನ್ನ ಮಾರ್ಗಗಳಿಂದಲೂ ಈಶ್ವರನನ್ನು ಹೊಂದಬಹುದು. 'ಭಿನ್ನ ರುಚಿರ್ಹಿ ಲೋಕಃ'. ಆದ್ದರಿಂದ ಪ್ರಕೃತಿಗೆ ಅಥವಾ ಸ್ವಭಾವಕ್ಕೆ ತಕ್ಕಂತೆ ಪ್ರಕಾರ ಅಥವಾ ವೈವಿಧ್ಯಗಳೂ ಇರುತ್ತವೆ. ಒಂದೇ ಮಾರ್ಗದಲ್ಲಿ ನುಗ್ಗುವುದು ಯೋಗ್ಯವಲ್ಲ.

ಇಂದು ಜಗತ್ತಿನಲ್ಲಿ ದೊಡ್ಡ ಧರ್ಮಗಳೆಂದು ಹೇಳಿಕೊಳ್ಳುವ ಅನೇಕ ಪಂಥಗಳು ಪ್ರಚಾರದಲ್ಲಿವೆ. ಇಸ್ಲಾಂ, ಈಸಾಯೀ ಧರ್ಮಗಳಿವೆ. ಬೌದ್ಧ ಮತ ಸಹ ಇದೆ. ಬುದ್ಧಧರ್ಮವಾದರೋ ಹಿಂದೂ ಧರ್ಮದ್ದೇ ಒಂದು ಪಂಥ. ಅನ್ಯಾನ್ಯ ಧರ್ಮ, ಮತಗಳಲ್ಲಿ ಇರುವ ಮಾರ್ಗ ಒಂದೇ ಒಂದು. ಎತ್ತರ–ಕುಳ್ಳ, ದಪ್ಪ–ಸಣ್ಣ ಏನೇ ಇರಲಿ; ದುರ್ಬಲ, ಬಾಲಕ, ವೃದ್ಧ ಯಾರೇ ಆಗಲಿ; ಎಲ್ಲರಿಗೂ ಒಂದೇ ಮಾರ್ಗ. ಆದರೆ ಎಲ್ಲರಿಗೂ ಒಂದೇ ರೀತಿಯ ಅಂಗಿ ತೊಡಿಸುವುದು ಬುದ್ಧಿವಂತರ ಲಕ್ಷಣವಲ್ಲ. ಅನ್ಯ ಧರ್ಮಗಳಲ್ಲಿ ಎಲ್ಲರಿಗೂ ಒಂದೇ ಬಣ್ಣದ ಬಟ್ಟೆ, ಒಂದೇ ಉಪಾಸನಾ ಮಾರ್ಗ. ಅವರವರಿಗೆ ಉಚಿತವಾದಂತೆ ವಿಚಾರ ಮಾಡುವ ಸ್ವಾತಂತ್ರ್ಯವಿಲ್ಲ.

## ಒಂದು ಲಕ್ಷ್ಯ - ಮಾರ್ಗ ಹಲವು

ಇಂತಹ ಏಕಾಂಗಿ ವಿಚಾರ ಬಿಟ್ಟು; ಎಲ್ಲ ರೀತಿಯ ವೃತ್ತಿ, ಬುದ್ಧಿ, ಅಂತಃಕರಣಗಳುಳ್ಳ ಜನರಿಗೂ ಅನುಕೂಲ ಉಪಾಸನಾ ಮಾರ್ಗಗಳನ್ನು ಕೊಟ್ಟು ಅವರೆಲ್ಲರೂ ಒಂದೊಂದು ಹೆಜ್ಜೆಯಾಗಿ ಉನ್ನತಿಗೇರಲವಕಾಶವಾಗುವಂತೆ ಅನೇಕ ವಿಧವಾದ ಪದ್ಧತಿಗಳು, ಅನೇಕ ವಿಧವಾದ ಉಪಾಸನಾ

ಮಾರ್ಗಗಳು ನಮ್ಮ ಸಾಂಸ್ಕೃತಿಕ ಜೀವನದಲ್ಲಿ ನಿರ್ಮಾಣವಾದವು. ಪದ್ಧತಿಗಳಿಗೂ ಒಂದೇ ಗುರಿಯಿದ್ದುದರಿಂದ ಅವು ಪರಸ್ಪರ ಸೂತ್ರಬದ್ಧ ಸ್ಪರ್ಧಾರಹಿತವಾಗಿದ್ದವು. ಎಲ್ಲರೂ ಒಂದೇ ಗುರಿಯ ಸಾಧನೆಯಲ್ಲಿ ರಾಗುವಂತೆ ಮಾಡಲು ನಮ್ಮಲ್ಲಿ ಆ ಭವ್ಯ ಲಕ್ಷ್ಯವನ್ನೇ ಶಾಶ್ವತವೆ ಈ ಎಲ್ಲ ಉಪಾಸನಾ ಮಾರ್ಗಗಳಲ್ಲೂ ಸದ್ಗುಣ ಸಮುಚ್ಚಯದ ಮುಂದುವರಿಯಲು ಮನುಷ್ಯನಿಗೆ ಊಟ-ತಿಂಡಿ, ಸಂಸಾರ ನಿವ ಸುರಕ್ಷಿತತೆಯ ಅನುಭವ, ಐಹಿಕ ಜೀವನದಲ್ಲಿ ಸಂತುಷ್ಟಿ ಇತ್ಯಾ ಆವಶ್ಯಕತೆಯಿದೆ. ಅದಕ್ಕೆ ಸರಿಯಾದ ಧರ್ಮದ ಆವಿಷ್ಕಾರ, ಸಮಾಜದವ್ಯ ಸಮಾಜದ ಅರ್ಥಸಂಪತ್ತಿನ ವ್ಯವಸ್ಥೆ ಹಾಗೂ ಅರ್ಥೋತ್ಪಾದನೆಯ ಮಾರ್ಗಗಳ ವ್ಯವಸ್ಥೆ ನಡೆಯಿತು. ಇವೆಲ್ಲ ಪರಸ್ಪರ ಪೂರಕವಾಗಿ, ಒಂದ ನ್ನೊಂದು ಹೊಂದಿಕೊಂಡು, ನಮ್ಮೆಲ್ಲರ ಉತ್ಕರ್ಷವಾಗುವಂತೆಯೂ ವ್ಯ ಆಯಿತು. ಹೀಗೆ ಒಂದು ಅತಿಶ್ರೇಷ್ಠವಾದ ದೋಷರಹಿತ ಸಮ ಪ್ರಸ್ಥಾಪಿತವಾಯಿತು. ಸಮಾಜವ್ಯವಸ್ಥೆ, ಅದರ ರಕ್ಷಣೆಗಾಗಿ ರಾಜ್ಯವ್ಯ ಗಳು, ಅದರಿಂದ ನಮ್ಮೆಲ್ಲರಿಗೂ ಐಹಿಕ ಜೀವನದಲ್ಲಾಗುವ ಸುಖದುಃಖ ಏಕೀಕರಣ ನಡೆಯಿತು. ಭಿನ್ನ ಭಿನ್ನ ಜನರೊಡನೆ ಬೆಳೆದ ಸಂಬಂಧಗ ಸಮಾನ ಶತ್ರುಮಿತ್ರ ಭಾವನೆಯ ಅನುಭವ ನಮಗಾಯಿತು.

## ರಾಷ್ಟ್ರದ ಅರ್ಥ

ಒಂದೇ ಸದ್ಗುಣ ಸಮುಚ್ಚಯ; ಒಂದೇ ರೀತಿಯ ಆದರ್ಶ ರಾ ವ್ಯವಸ್ಥೆ; ಅದರಲ್ಲಿ ಒಂದೇ ಇತಿಹಾಸ, ಶ್ರೇಷ್ಠ ಪುರುಷರ ಸಮಾನ ಆದ ಸಮಾನವಾದ ಶ್ರದ್ಧೆಗಳು, ಆಸೆ ಆಕಾಂಕ್ಷೆಗಳು; ಜಗತ್ತಿನ ಭಿನ್ನ ಭಿನ್ನ ಸಂ ಗಳ ಬಗ್ಗೆ ಹಿತಸಂಬಂಧಗಳ, ಸುಖದುಃಖಗಳ ಸಮಾನ ಅನುಭವ; ಸಮ ಶತ್ರುಮಿತ್ರ ಭಾವನೆ - ಇವೆಲ್ಲ ಜಾಗೃತವಾದವು, ಪ್ರಸ್ಥಾಪಿತವಾದವು. ರೀತಿ ಪುತ್ರರೂಪದಲ್ಲಿ ಸಮಾಜವೊಂದು ಸಂಪೂರ್ಣ ಏಕತೆಯಿಂದ ವಾಸಿ ತ್ತಿದ್ದರೆ, ಅದಕ್ಕೆ ರಾಷ್ಟ್ರವೆನ್ನುತ್ತಾರೆ. ಇದುವರೆಗೆ ಪ್ರಪಂಚದ ದೊ ದೊಡ್ಡ ವಿದ್ವಾಂಸರನೇಕರು ರಾಷ್ಟ್ರದ ಬಗ್ಗೆ ಭಿನ್ನಭಿನ್ನ ವ್ಯಾಖ್ಯೆಗಳನ್ನು ಕೊ ದ್ದಾರೆ. ಆ ಎಲ್ಲ ವ್ಯಾಖ್ಯೆಗಳ ನಿಷ್ಕರ್ಷೆ ಇದೇ ಆಗಿದೆ; ನಿರ್ದಿಷ್ಟವಾ

ಎಲ್ಲೆಗಳನ್ನುಳ್ಳ ಒಂದು ವಿಶಿಷ್ಟ ಭೂಭಾಗ; ಅದನ್ನು ಮಾತೆಯಂತೆ ಕಂಡು ಆದರ ಬಗ್ಗೆ ನಿರಂತರ ಶ್ರದ್ಧೆಯುಳ್ಳ ಹಾಗೂ ಸಮಾನ ಧರ್ಮ-ಸಂಸ್ಕೃತಿ, ಸಮಾನ ಶತ್ರು-ಮಿತ್ರ ಭಾವನೆ, ಸಮಾನ ಆಸೆ-ಆಕಾಂಕ್ಷೆಗಳನ್ನು ಹೊಂದಿ, ಪರಸ್ಪರ ಹಿತಸಂಬಂಧಗಳಲ್ಲಿ ಒಗ್ಗೂಡಿ ಏಕಾತ್ಮತೆಯ ಅನುಭೂತಿಯುಳ್ಳ ಪುತ್ರರೂಪೀ ಸಮಾಜವೇ ರಾಷ್ಟ್ರವೆನಿಸುತ್ತದೆ. ಎಂದ ಮೇಲೆ ಈ ಭೂಮಿಯಲ್ಲಿ ರಾಷ್ಟ್ರರೂಪದಲ್ಲಿ ಹಿಂದೂಜೀವನ ನಿತ್ಯಸಿದ್ಧವಾಗಿ ನಿಂತಿದೆ.

## ಸತ್ಯವನ್ನೊಪ್ಪಿಕೊಳ್ಳೋಣ

ವಾಸ್ತವಿಕ ಇತಿಹಾಸವನ್ನು ನೈಜದೃಷ್ಟಿಯಿಂದ ನೋಡಿದ್ದಾದರೆ, ಸತ್ಯವನ್ನು ವಿರೂಪಗೊಳಿಸದೆ ಸತ್ಯರೂಪದಲ್ಲೇ ಗ್ರಹಿಸುವುದಾದರೆ, ಕೇವಲ ಬಾಯಿನಲ್ಲಿ 'ಸತ್ಯಮೇವ ಜಯತೇ' ಎಂದು ಘೋಷಿಸಿ, ಮಿಥ್ಯೆ ಹಾಗೂ ಅಸತ್ಯದ ವ್ಯವಹಾರ ನಡೆಸದಿರಬೇಕಾದರೆ, ಇತಿಹಾಸ ಹುಟ್ಟುವುದಕ್ಕೂ ಮೊದಲಿನ ಕಾಲದಿಂದ ಈ ಭೂಮಿಯಲ್ಲಿ ಹಿಂದೂಸಮಾಜದ ರಾಷ್ಟ್ರಜೀವನ, ಎಂದರೆ ಹಿಂದೂ ರಾಷ್ಟ್ರಜೀವನ ಸ್ವಯಂಸಿದ್ಧವಾಗಿ ನೆಲೆಸಿತ್ತೆಂದು ಒಪ್ಪಲೇ ಬೇಕು. ಈ ಭೂಮಿಯ ಇತಿಹಾಸ ಹಿಂದೂರಾಷ್ಟ್ರದ ಇತಿಹಾಸವಾಗಿದೆ. ಕಳೆದ ಒಂದು ಸಹಸ್ರ ವರ್ಷಗಳಿಂದ ಕಂಡುಬರುವ ಅನ್ಯಾನ್ಯ ಸಮಾಜಗಳು ಹಿಂದೂರಾಷ್ಟ್ರದ ಮೇಲೆ ಆಕ್ರಮಣಕ್ಕಾಗಿ ಇಲ್ಲಿಗೆ ಬಂದವು. ಕೆಲವೊಮ್ಮೆ ಆಶ್ರಯಾರ್ಥಿಗಳಾಗಿಯೂ ಬಂದಿರಬಹುದು. ಆದರೆ ಹಿಂದೂರಾಷ್ಟ್ರದ ಅಂಗ ರೂಪವಾಗಿ ಮಾತ್ರ ಅಲ್ಲ. ಇತಿಹಾಸದ ಈ ಸುಸ್ಪಷ್ಟ ಚಿತ್ರವನ್ನು ನಾವು ನಮ್ಮ ಕಣ್ಣೆದುರಿಗಿಟ್ಟುಕೊಳ್ಳಬೇಕು. ಇಲ್ಲಿ ಒಂದೇ ಒಂದು ರಾಷ್ಟ್ರಜೀವನ ಪ್ರಾಚೀನ ಕಾಲದಿಂದಲೂ ಸುಖಸಮೃದ್ಧವಾಗಿ, ಸುಸಂಸ್ಕೃತ, ಅತೀವ ಸಭ್ಯ, ಅತ್ಯಂತ ಧ್ಯೇಯಪೂರ್ಣ ಹಾಗೂ ಉದಾತ್ತ ರೀತಿಯಿಂದ ನಡೆದುಬಂದಿದೆ. ನಡುವೆ ಒಂದು ಸಹಸ್ರ ವರ್ಷಗಳಕಾಲದಲ್ಲಿ ಆಕ್ರಮಣಕಾರಿಗಳನ್ನೆದುರಿಸುತ್ತಾ, ಒಮ್ಮೊಮ್ಮೆ ವಿಜಯ ಹಾಗೂ ಕೆಲವೊಮ್ಮೆ ಪರಾಜಯಗೊಳಿಸುತ್ತಾ, ಉಳಿದು ಬಂದಿದೆ. ಮತ್ತೊಮ್ಮೆ ತನ್ನ ಶಕ್ತಿಯನ್ನು ಏಕತ್ರಿತಗೊಳಿಸಿ, ಆಕ್ರಮಣ ಕಾರಿಗಳನ್ನು ಹೊರಗಟ್ಟಿ, ಪುನಃ ಸ್ವಾಧೀನಯುಕ್ತ ಜೀವನವನ್ನು ಪ್ರಾಪ್ತ

ಮಾಡಿಕೊಳ್ಳುವ ಆಕಾಂಕ್ಷೆಯಿಂದ ಎದ್ದು ನಿಲ್ಲುತ್ತಿದೆ. ಚರಿತ್ರೆಯ ಈ ಸೂತ್ರಬದ್ಧ ಚಿತ್ರವು ಕಣ್ಮರೆಯಾಗದಂತೆ ನೆನಪಿನಲ್ಲಿ ಉಳಿಸಿಕೊಳ್ಳುವುದು ಅತ್ಯಂತ ಅಗತ್ಯ. ಇದು ಐತಿಹಾಸಿಕ ಸತ್ಯವಾಗಿದೆ.

## ನಮ್ಮ ಸಾಂಸ್ಕೃತಿಕ ಸಾಮ್ರಾಜ್ಯ

ಈ ಸತ್ಯದ ದರ್ಶನವಾದ ನಂತರ ನಮಗೆನಿಸುತ್ತದೆ- ನಮ್ಮದು ಇಷ್ಟು ದೊಡ್ಡ ದೇಶ ಮತ್ತು ಇಷ್ಟೊಂದು ಅಧಿಕ ಜನಸಂಖ್ಯೆ; ಶೌರ್ಯ-ಪರಾಕ್ರಮ ಗಳಿಂದ ತುಂಬಿ, ಶಾರೀರಿಕ ಬಲ-ಶಸ್ತ್ರಾಸ್ತ್ರಗಳಿಂದ ಸುಸಜ್ಜಿತವಾಗಿ, ಸರ್ವ ವಿಧ ಐಹಿಕ ಸಂಪತ್ತು-ಸಮೃದ್ಧಿಗಳಿಂದ ಮೆರೆಯುತ್ತಿದ್ದ ಸುಸಂಸ್ಕೃತ ಸಮಾಜ; ಇಷ್ಟೆಲ್ಲ ಇದ್ದೂ ಆಕ್ರಮಣಕಾರಿಗಳು ಹೇಗೆ ಬಂದರು? ಈ ರಾಷ್ಟ್ರದ ಪ್ರಾಚೀನ ಕಾಲದ ವರ್ಣನೆ ನಮಗೆ ದೊರೆಯುತ್ತದೆ. ಇದೊಂದು ಅತ್ಯಂತ ಸುಖೀ ಹಾಗೂ ಸಮೃದ್ಧ ರಾಷ್ಟ್ರವಾಗಿತ್ತು; ಜ್ಞಾನಸಂಪನ್ನವಾಗಿತ್ತು. ತನ್ನ ಪರಾಕ್ರಮದ ಆಧಾರದಿಂದ ಸಂಪೂರ್ಣ ಜಗತ್ತಿನಲ್ಲಿ ಶ್ರೇಷ್ಠ ವಿಚಾರವನ್ನು ಹರಡಿತ್ತು. ಮಾನವಕುಲದ ಮೃಗಜೀವನವನ್ನು ಬದಲಿಸಲು ಬಹುವಾಗಿ ಪರಿಶ್ರಮಿಸಿ, ಎಲ್ಲ ದಿಕ್ಕುಗಳಲ್ಲಿಯೂ ಧರ್ಮಸಾಮ್ರಾಜ್ಯವನ್ನು ಹರಡಿತ್ತು. ಆ ಸಾಮ್ರಾಜ್ಯದ ಅವಶೇಷಗಳು ಈಗಲೂ ದೊರೆಯುತ್ತವೆ. ಅಮೆರಿಕಾ ಮತ್ತು ಮೆಕ್ಸಿಕೋಗಳಲ್ಲಿ ವೈದಿಕ ದೇವತೆಗಳ ಮಂದಿರಗಳು ಇಂದಿಗೂ ಇವೆ. ಜಪಾನಿನ ಬಗ್ಗೆ ಇತ್ತೀಚಿಗೆ ಒಂದು ಪುಸ್ತಕ ಪ್ರಕಟವಾಗಿದೆ. ಬುದ್ಧ ಧರ್ಮಕ್ಕೆ ಮೊದಲು ಜಪಾನಿನಲ್ಲಿ ಇಂದ್ರ, ವರುಣ ಇತ್ಯಾದಿ ದೇವತೆಗಳನ್ನು ಪೂಜಿಸುತ್ತಿದ್ದರೆಂದು ಅದರಲ್ಲಿ ಬರೆಯಲಾಗಿದೆ. ಅಲ್ಲಿನ ಮಂದಿರಗಳಲ್ಲಿ ಈ ದೇವತೆಗಳ ಸುಂದರ ಮೂರ್ತಿಗಳಿದ್ದವು. ಬುದ್ಧಧರ್ಮ ಹರಡುವುದಕ್ಕೆ ಹಿಂದೆ ಅಲ್ಲಿ ಬ್ರಾಹ್ಮಣ ಧರ್ಮದ, ಅಂದರೆ ವೈದಿಕಧರ್ಮದ ಪಾಲನೆ ನಡೆಯು ತ್ತಿತ್ತು. ಆ ಪುಸ್ತಕದಲ್ಲಿ ಈ ವಿಚಾರಗಳನ್ನು ಅತ್ಯಂತ ಕೃತಜ್ಞತಾಪೂರ್ವಕ ವಾಗಿ ಸ್ಮರಿಸಲಾಗಿದೆ. ಹೀಗೆ ನಮ್ಮ ಋಷಿ, ಮುನಿ, ವೀರರು ಇಲ್ಲಿ ಒಂದು ಪ್ರಬಲ ಸಾಮ್ರಾಜ್ಯ ಕಟ್ಟಿ, ಪರದೇಶಗಳಿಗೂ ಹೋಗಿ ಸಾಂಸ್ಕೃತಿಕ ಹಾಗೂ ದೈವೀಸಾಮ್ರಾಜ್ಯವನ್ನು ಸ್ಥಾಪಿಸಿದ್ದರು. ಅಂಥದರಲ್ಲಿ ಈ ದೇಶದಲ್ಲಿ

ಪರಕೀಯರು ತಮ್ಮ ರಾಜ್ಯವನ್ನಾದರೂ ಹೇಗೆ ಪ್ರಸ್ಥಾಪಿಸಿದರು? ಇದಕ್ಕೆ ಸ್ಪಷ್ಟ ಉತ್ತರವನ್ನು ನಾವು ಹುಡುಕಲೇ ಬೇಕು.

## ಪತನದ ಕಾರಣ - ವಿಸ್ಮರಣೆ

ನಮ್ಮ ಪತನದ ಕಾರಣವೇನು ? ಇದಕ್ಕೆ ಇತಿಹಾಸದಲ್ಲಿ ಸರಳವಾದ, ಆದರೆ ಸ್ಪಷ್ಟವಾದ ಉತ್ತರ ದೊರೆಯುತ್ತದೆ. ಮಹಾಭಾರತ ನಡೆದ ನಂತರ ಮೂರು ಸಾವಿರ ವರ್ಷಗಳ ಕಾಲ ಈ ದೇಶದೊಳಗೆ ಕಾಲಿಡಲು ಯಾವ ಆಕ್ರಮಣಕಾರಿಯೂ ಧೈರ್ಯ ತಾಳಲಿಲ್ಲ. ಹೀಗಾಗಿ ಒಂದು ದೀರ್ಘ 'ಪೌನಕಾಲ' ಬಂದಿತು. ಜನರು ಸುಖ ಸಮೃದ್ಧಿಗಳನ್ನನುಭವಿಸುವುದರಲ್ಲೇ ಮಗ್ನರಾದರು. ಸಮಾಜ ಜಡವಾಯಿತು. ಪರಿಶ್ರಮದ, ಸಾಹಸದ ವೃತ್ತಿ ನಾಶವಾಯಿತು. ಸುಖ ಸಮೃದ್ಧಿಗಳಿದ್ದು, ಯಾವುದೇ ಅಡ್ಡಿ ಆತಂಕಗಳಿಲ್ಲದಿದ್ದಲ್ಲಿ – ಕುಟುಂಬದಲ್ಲಿನ ಅಣ್ಣತಮ್ಮಂದಿರಂತೆ – ಜನರು ಸಂಪತ್ತಿನ ಹಂಚಿಕೆಗಾಗಿ ಜಗಳವಾಡುತ್ತಾರೆ. ಪ್ರತಿಯೊಬ್ಬನೂ ತನಗೆ ಸಿಕ್ಕಿದ ಐಶ್ವರ್ಯಕ್ಕೆ, ಜನರಿಗೆ ಅಥವಾ ಭೂಮಿಗೆ ಒಡೆಯನಾಗಬಯಸುತ್ತಾನೆ. ಅಲ್ಲದೆ, ಇಡೀ ಭಾರತ ಒಂದು ರಾಷ್ಟ್ರ, ಇದು ನನ್ನ ಮಾತೃಭೂಮಿ ಎಂಬ ಸತ್ಯವನ್ನು ಜನ ಮರೆತರು. ಆ ಸಂಸ್ಕಾರ ಅಂತಃಕರಣದಿಂದ ಅಳಿಸಿ ಹೋಗುತ್ತಲೇ, ಸಂಘರ್ಷ ಪ್ರಾರಂಭವಾಯಿತು. ರಾಷ್ಟ್ರಭಾವದ ವಿಸ್ಮರಣೆಯಿಂದ ಸ್ವಾರ್ಥಪೂರ್ತಿಗಾಗಿ ಪರಕೀಯರನ್ನು ಸಹಾಯಕ್ಕೆ ಕರೆದರು. ಪರಕೀಯರ ಆಮಂತ್ರಣ ರಾಷ್ಟ್ರಜೀವನಕ್ಕೆ ವಿಪತ್ತೆಂಬ ಸಿದ್ಧಾಂತವನ್ನು ಮರೆತುದರ ಫಲವಾಗಿ ಸಂಪೂರ್ಣ ರಾಷ್ಟ್ರದ ಮೇಲೆ ದಾಸ್ಯದ ಅಂಧಕಾರ ಕವಿಯಿತು. ಏಕಸಮಾಜವೆಂಬ ಭಾವನೆ ಕೇವಲ ಶಬ್ದದಲ್ಲಿ ಹಾಗೂ ಕಲ್ಪನೆಯಲ್ಲಿ ಮಾತ್ರ ಉಳಿಯಿತು, ವ್ಯವಹಾರದಲ್ಲಿ ಬರಲಿಲ್ಲ. ಮಾತೃಭೂಮಿಯ ಭಕ್ತಿ ಧರ್ಮಕ್ಕಷ್ಟೇ ಸೀಮಿತವಾಯಿತು. ತೀರ್ಥಯಾತ್ರೆಯ ಸಮಯದಲ್ಲಿ ಜನರು ಪೂರ್ಣ ದೇಶವನ್ನು ಸುತ್ತುತ್ತಿದ್ದರು. ಆದರೆ ವ್ಯವಹಾರದಲ್ಲಿ ತಾಯ್ನಾಡಿನ ಬಗ್ಗೆ ಸಮಗ್ರರೂಪದ ಶ್ರದ್ಧೆ ನಶಿಸಿಹೋಗಿತ್ತು. ಒಬ್ಬ ಆಂಗ್ಲ ಇತಿಹಾಸಕಾರ ಹೀಗೆಂದಿದ್ದಾನೆ: "ಬ್ರಿಟನ್ನಿನಲ್ಲಿದ್ದ ಎಲ್ಲ

ಜನರೂ ಶಸ್ತ್ರಸಜ್ಜಿತರಾಗಿ ಹಿಂದೂಸ್ಥಾನದ ಮೇಲೆ ಆಕ್ರಮಣ ನಡೆಸಿದ್ದರೂ ಜಯ ಸಿಕ್ಕುತ್ತಿರಲಿಲ್ಲ. ಆದರೆ ಅಂತಃಕಲಹಗಳಲ್ಲಿ ಮುಳುಗಿದ್ದ ಹಿಂದೂಸ್ಥಾನದ ಅಸಂಘಟಿತ ಜನರು ತಾವೇ ತಮ್ಮ ಭೂಮಿಯನ್ನು ಗೆದ್ದು ಬ್ರಿಟಿಷರಿಗಿತ್ತು ಅವರ ಗುಲಾಮಿತನ ಸ್ವೀಕರಿಸಿದರು!" ಇದರ ಅರ್ಥವೇನು? ನಮಗೆ ಏಕರಾಷ್ಟ್ರೀಯತ್ವದ ವಿಸ್ಮರಣೆಯಾಯಿತು; ಆದರಿಂದ ಅಸಂಘಟಿತತೆ ಉತ್ಪನ್ನವಾಯಿತು; ಅಸಂಘಟಿತತೆ ದೌರ್ಬಲ್ಯಕ್ಕೆಡೆಗೊಟ್ಟಿತು. ಈ ದುರ್ಬಲತೆಯಿಂದಲೇ ಪರಕೀಯರ ಆಕ್ರಮಣ ಯಶಸ್ವಿಯಾಯಿತು.

## ಇತಿಹಾಸದ ಪುನರಾವರ್ತನೆಯಾಗದಿರಲಿ

ನಮ್ಮ ಸೋಲಿನ ಕಾರಣಗಳನ್ನು ಇತಿಹಾಸ ಸಾರಿಹೇಳುತ್ತಿದೆ. ಆದರಿಂದ ಪಾಠ ಕಲಿಯೋಣ, ನಮ್ಮ ಮುಂದಿನ ಕರ್ತವ್ಯವನ್ನರಿಯೋಣ. ನಮ್ಮ ದೇಶ ಪುನಃ ಸಂಕಟಗಳಿಗೊಳಗಾಗಬಾರದು, ಸಮಾಜದ ಮೇಲೆ ಪುನಃ ಆಕ್ರಮಣ ನಡೆಯಬಾರದು, ಪುನಃ ಈ ಭೂಮಿಯಲ್ಲಿ ದಾಸ್ಯದ ಅಪಮಾನಿತ, ದುಃಖಪೂರ್ಣ ಜೀವನ ಬರಲೇಕೂಡದು. ಅದಕ್ಕಾಗಿ ನಮ್ಮ ಸಮಾಜದಲ್ಲಿನ ಅನೈಕ್ಯತೆ, ಸ್ವಾರ್ಥಭಾವ, ಅಕರ್ಮಣ್ಯತೆಗಳನ್ನು ದೂರಗೊಳಿಸಿ ಸುಸೂತ್ರ, ಸುಸಂಘಟಿತ, ಸಾಮರ್ಥ್ಯಯುಕ್ತ ಜೀವನವನ್ನು ನಿರ್ಮಿಸಬೇಕಾಗಿದೆ. ಪ್ರತಿಯೊಬ್ಬನ ಹೃದಯದಲ್ಲೂ 'ಈ ರಾಷ್ಟ್ರ ನನ್ನದು' ಎಂಬ ಅನುಭೂತಿಯನ್ನೆಚ್ಚರಿಸಿ, ಅದರ ಆಧಾರದ ಮೇಲೆ ವ್ಯಕ್ತಿವ್ಯಕ್ತಿಗಳ ನಡುವೆ ಸ್ನೇಹಭಾವವನ್ನು ಬೆಳೆಸಿ, ಆ ಸ್ನೇಹಸಂಪನ್ನ ವ್ಯಕ್ತಿಗಳು ಯೋಗ್ಯರೀತಿಯಲ್ಲಿ ತಮ್ಮ ವೈಯ್ಯಕ್ತಿಕ ಶಕ್ತಿಯನ್ನು ಉಪಯೋಗಿಸಲು ಕಲಿಸುವುದಕ್ಕಾಗಿ ಅನುಶಾಸನದ ಸಂಸ್ಕಾರಗಳನ್ನು ಎಲ್ಲರ ಹೃದಯಗಳಲ್ಲಿ ಅಂಕಿತಗೊಳಿಸಬೇಕಾಗಿದೆ. ಆಗಮಾತ್ರ ರಾಷ್ಟ್ರದ ಸರ್ವಾಂಗೀಣ ಉನ್ನತಿ ಸಾಧಿಸಬಲ್ಲೆವು; ಪರದೇಶಗಳಲ್ಲಿ ಭಿಕ್ಷೆಬೇಡಿ, ಕೆಲವು ಯೋಜನೆಗಳನ್ನು ಮಾಡಿ, ನೀರಿನ ಕಾಲುವೆಗಳನ್ನು ತೋಡಿದ ಮಾತ್ರಕ್ಕೆ ಸಮಸ್ಯೆಗಳು ಬಗೆಹರಿಯುವುದಿಲ್ಲ. ಆದ್ದರಿಂದ ತನ್ನೆಲ್ಲ ಶಕ್ತಿಯನ್ನೂ ಕೇಂದ್ರೀಕೃತಗೊಳಿಸಿ, ಯಾವುದೇ ಕಾರ್ಯಕ್ಕಾದರೂ ಅನುಗೊಳಿಸಬಲ್ಲ ಪಾತ್ರತೆಯನ್ನು ವ್ಯಕ್ತಿಯಲ್ಲಿ

ಅಥವಾ ವ್ಯಕ್ತಿಸಮೂಹದಲ್ಲಿ ನಿರ್ಮಿಸಬಲ್ಲಂಥ ಸುಸಂಘಟಿತ ಶಕ್ತಿನಿರ್ಮಾಣದ ಯೋಜನೆಯನ್ನು ಸಂಘವು ಅಳವಡಿಸಿಕೊಂಡಿದೆ. ನಾವು ಹಿಂದುಗಳೇ ಆಗಿರುವುದರಿಂದ ನಮಗೆ ಇದಕ್ಕಿಂತ ಪ್ರಿಯವಾದ ಕಾರ್ಯ ಮತ್ತಾವುದಿದ್ದೀತು?

## ಆದರೆ ಜನರ ನಿದ್ದೆ ಕಳೆದಿಲ್ಲ

ಇಂದು ಸಂಘಟನೆ ಅತ್ಯಂತ ಅಗತ್ಯವೆಂದು ತಿಳಿದೆವು. ಆದರೆ ಈ ಇಪ್ಪತ್ತನೆಯ ಶತಮಾನದಲ್ಲಿ ಜನರು ಬಹಳ ತಿಳಿದವರಂತೆ ರಷ್ಯಾ, ಚೀನಾ, ಅಂತರಗ್ರಹಯಾನ ಇತ್ಯಾದಿ ವಿಷಯಗಳಮೇಲೆಯೇ ಮಾತನಾಡುತ್ತಿರುತ್ತಾರೆ. ಇದನ್ನು ಬಿಟ್ಟು ಇನ್ನು ಬೇರೆ ವಿಚಾರವೇ ಇಲ್ಲವೆಂಬಂತೆ, ಚಂದ್ರಲೋಕಕ್ಕೆ ಯಾರಾದರೂ ಹೋದರೇ, ಇಲ್ಲವೇ ? ಇತ್ಯಾದಿ ಉನ್ನತಮಟ್ಟದ (!) ವಿಚಾರವೇ ಅವರಿಗೆ ಸದಾ ಬೇಕು. ಇಂಥ ಪರಿಸ್ಥಿತಿಯಲ್ಲಿ ಮಾತೃಭೂಮಿ, ದೇಶಭಕ್ತಿ, ಇತ್ಯಾದಿಗಳ ಬಗ್ಗೆ ಸಂಸ್ಕಾರ ನೀಡುವ ಅವಶ್ಯಕತೆಯೇನು? ನಿಮ್ಮ ನಾಲ್ಕೂಕಡೆ ನೋಡಿ, ಎಷ್ಟೊಂದು ದೇಶಭಕ್ತರಿದ್ದಾರೆ ! ಎಂದೂ ಕೆಲವರು ಹೇಳುತ್ತಾರೆ. ನಿಜ, ಇಂದು ದೇಶಭಕ್ತರ ಒಂದು ಸಮವಸ್ತ್ರ–ಯೂನಿಫಾರಂ–ಸಹ ಆಗಿಹೋಗಿಲ್ಲವೇ ? ಅದನ್ನು ಧರಿಸಿದ ದೇಶಭಕ್ತರ ದೊಡ್ಡಗುಂಪೇ ಇದೆ.ಹೀಗಿರುವಾಗ ಇನ್ನೂ ದೇಶಭಕ್ತಿ ನಿರ್ಮಿಸುವುದು ಅಗತ್ಯವೇ ? ನಮ್ಮಲ್ಲಿ ಕೆಲವರು ದೊಡ್ಡ ದೊಡ್ಡ ನಾಯಕರಂತೂ ಹಿಂದುಗಳನ್ನಷ್ಟೇ ಏಕೆ, ಹಿಂದೂ, ಮುಸಲ್ಮಾನ್, ಈಸಾಯೀ, ಚೀನೀ, ರಷ್ಯನರು ಇತ್ಯಾದಿ ಎಲ್ಲರನ್ನೂ 'ಭಾಯಿ–ಭಾಯಿ' ಎಂದು ಕರೆದು ಎಷ್ಟು ವಿಶಾಲ ಭಾವನೆಯನ್ನು ಆವಾಹನೆ ಮಾಡುತ್ತಿದ್ದಾರೆ! ಹೀಗಿರುವಾಗ ಹಿಂದುಗಳದೇ ಏಕಾತ್ಮತೆಯ ಜಾಗರಣೆಯೇಕೆ ? ಈಗ ರಾಷ್ಟ್ರೀಯ ಭಾವನೆಗೇನು ಕಡಿಮೆ ? ಪ್ರತಿಯೊಂದು ದೊಡ್ಡಯೋಜನೆ, ಕಾರ್ಯಗಳಿಗೂ 'ರಾಷ್ಟ್ರೀಯ–ನ್ಯಾಷನಲ್' ಎಂಬ ಪದವನ್ನು ಹೆಚ್ಚು ಹೆಚ್ಚು ಬಳಸುತ್ತಿಲ್ಲವೇ ? ಈಗಲಾದರೋ ನಮ್ಮದೇ ರಾಜ್ಯವಿದೆ, ಸರ್ಕಾರ ನಮ್ಮ ರಕ್ಷಣೆ ಮಾಡುತ್ತದೆ; ಸಂಘಟನೆಯ ಅಗತ್ಯವಾದರೂ ಏನು ? ಎಂದು ಜನ ಕೇಳುತ್ತಿದ್ದಾರೆ.

## ಭಗ್ನ ವಿದಾರಕ ಚಿತ್ರ

ನಾನೊಂದು ಸರಳವಾದ ಪ್ರಶ್ನೆ ಕೇಳುತ್ತೇನೆ. ನಾವೆಲ್ಲರೂ ನಮ್ಮನಮ್ಮ ಊಟ-ತಿಂಡಿ, ಕೆಲಸ-ಕಾರ್ಯ ಮಾಡುತ್ತೇವೆ. ಸ್ವಗೌರವ ಸಂಪಾದನೆಯ ಇಚ್ಛೆ ನಮಗಿದೆ. ಈ ಎಲ್ಲ ಚಟುವಟಿಕೆಗಳ ಮಧ್ಯೆ, ಈ ಭೂಮಿ ನನ್ನ ಮಾತೆ, ನಾನು ಇದರ ಪುತ್ರ; ಇದರ ರಕ್ಷಣೆಯ ಭಾರ, ಜಗತ್ತಿನಲ್ಲಿ ಇದಕ್ಕೆ ಸನ್ಮಾನ ದೊರೆಯುವಂತೆ ಮಾಡುವ ಜವಾಬ್ದಾರಿ ನನ್ನದು; ಇದರ ಗೌರವವನ್ನು ಅಧಿಕಗೊಳಿಸುವ ದಾಯಿತ್ವ ನನ್ನ ಮೇಲಿದೆ! ಎಂಬ ವಿಚಾರ-ಅಳಘಂಟೆಗಳಲ್ಲಿ ಒಂದು ಕ್ಷಣವಾದರೂ ಸರಿಯೆ-ನಮ್ಮ ಮನಸ್ಸಿನಲ್ಲಿ ಬರುತ್ತದೆಯೆ? ಪ್ರಾಮಾಣಿಕತೆಯಿಂದ ಯೋಚಿಸಿದರೆ ಇಲ್ಲವೆಂದೇ ಹೇಳಬೇಕಾಗುತ್ತದೆ. ನಾವು ಅಭಾರತೀಯ ವಿಚಾರಗಳಿಗಂಟಿಕೊಂಡು ಎಲ್ಲ ರೀತಿಯ ಸ್ವಾರ್ಥಸಾಧನೆಗಳಲ್ಲಿ ಮಗ್ನರಾಗಿದ್ದೇವೆ. ಆದರೆ ಒಂದು ನಿಮಿಷ ನಾವು ಕನ್ಯಾಕುಮಾರಿಯಿಂದ-ತ್ರಿವಿಷ್ಟಪ-ಟಿಬೆಟ್‌ವರೆಗಿನ ನಮ್ಮೀ ಮಾತೃಭೂಮಿಯ ಚಿತ್ರವನ್ನು ಸ್ಮರಿಸಿಕೊಳ್ಳೋಣ ಟಿಬೆಟ್ ಪ್ರಾಚೀನ ಕಾಲದಿಂದ ಭಾರತದ ಅವಿಭಾಜ್ಯ ಅಂಗವಾಗಿತ್ತು. ಅದನ್ನು ತ್ರಿವಿಷ್ಟಪ-ದೇವಭೂಮಿ ಎಂದು ಕರೆಯುವ ಹೆಮ್ಮೆ ನಮ್ಮದಾಗಿತ್ತು. ಆದರೆ ಅದು ಕೈಬಿಟ್ಟು ಹೋಯಿತು. ಇನ್ನು, ಹಿಮಾಲಯಗಳು ನಮ್ಮ ನರನಾಡಿಗಳೊಡನೆ ಒಂದಾಗಿದೆ, ರಕ್ತದೊಡನೆ ಸೇರಿಹೋಗಿದೆ ಎಂದು ನಮ್ಮ ಪ್ರಧಾನಿಗಳು ಗರ್ಜಿಸಿದ್ದಾರೆ. ಆದರೆ ಅವರ ಗರ್ಜನೆ ಕೇಳಿ ನನಗೆ ಭಯವಾಗುತ್ತಿದೆ. ನನ್ನ ಮಾತಿನಿಂದ ನಿಮಗೆ ಆಶ್ಚರ್ಯವಾಗಬಹುದು; ಆದರೆ ನನ್ನ ಭಯಕ್ಕೆ ಪ್ರಬಲ ಕಾರಣಗಳಿವೆ. ಪಾಕಿಸ್ಥಾನ ನಿರ್ಮಿಸುವುದಿಲ್ಲವೆಂಬ ಮಾತನ್ನು ಹಿಂದೊಮ್ಮೆ ನಾವು ಇದೇ ನಾಯಕರಿಂದ ಕೇಳಿದ್ದೆವು; ಆದರೂ ಸಹ ಪಾಕಿಸ್ಥಾನವಾಯಿತು. ಕಾಶ್ಮೀರ ಬಿಟ್ಟುಕೊಡುವುದಿಲ್ಲವೆಂದಿದ್ದರು. ಆದರೆ ಅದರ ಒಂದು ಭಾಗ ಇಂದಿಗೂ ನಮಗಿಲ್ಲ. ಪ್ರಧಾನಿ ನೆಹರೂರವರು ಪಶ್ಚಿಮ ಬಂಗಾಲಕ್ಕೆ ಹೋಗಿದ್ದಾಗ ಅಲ್ಲಿನ ನಿರಾಶ್ರಿತರ ಕರುಣಾಜನಕ ಸ್ಥಿತಿಯನ್ನು ಕಂಡು, ಸೈನ್ಯಬಲದಿಂದ ಪೂರ್ವಬಂಗಾಲವನ್ನು ವಶಪಡಿಸಿಕೊಂಡು, ಎಲ್ಲ ನಿರ್ವಾಸಿತರನ್ನೂ ಅವರವರ ಸ್ಥಾನದಲ್ಲಿ ನೆಲೆಗೊಳಿಸುತ್ತೇವೆಂದರು. ಆದರೆ ಅವರು ದಿಲ್ಲಿಗೆ ಹಿಂದಿರುಗಿದಕೂಡಲೇ ಆ ಬಗ್ಗೆ ಪ್ರಶ್ನಿಸಿದಾಗ, ಸಂಧಾನ

ನಡೆಸುತ್ತೇವೆ ಎಂದರು. ಕಡೆಗೆ ಒಪ್ಪಂದದಲ್ಲೂ ಸೋಲಾಯಿತೆಂಬುದು ತಿಳಿದೇ ಇದೆ. ಈಗ ಹಿಮಾಲಯದ ಬಗ್ಗೆ ಮಾತನಾಡುತ್ತಿದ್ದಾರೆ. ಆದರೆ ಅದನ್ನೂ ಬಿಟ್ಟುಕೊಡುವುದರಲ್ಲಿದ್ದಾರೆ; ಈಗಾಗಲೇ ಅದು ಚೀನಾ ಆಕ್ರಮಣಕಾರಿಗಳ ವಶದಲ್ಲಿದೆ. ಪವಿತ್ರವಾದ ಕೈಲಾಸ, ಮಾನಸ-ಸರೋವರಗಳನ್ನು ಸಂರಕ್ಷಿಸುವ ಶಕ್ತಿ, ಸಂದರ್ಶಿಸುವ ಸ್ವಾತಂತ್ರ್ಯ ಇಂದು ನಮ್ಮಲ್ಲುಳಿದಿಲ್ಲ. ನಮ್ಮ ಕೈಲಾಸ ಶೃಂಗದ ದರ್ಶನ, ನಮ್ಮದೇ ಮಾನಸ-ಸರೋವರದ ಸ್ನಾನಕ್ಕಾಗಿ ಪರಕೀಯರ ಅನುಮತಿ ಯಾಚಿಸಬೇಕಾಗಿದೆ. ನಾವು ಗಾಂಧಾರವೆಂದು ಕರೆಯುತ್ತಿದ್ದ ನಮ್ಮ ಪ್ರಾಂತ ಇಂದು ಅಫ್ಘಾನಿಸ್ಥಾನವಾಗಿದೆ. ಭಾರತ ಮಾತೆಯ ಪುತ್ರರೇ ಆಕೆಯ ಅಂಗಗಳಾದ ಸಿಂಧ್, ಪಂಜಾಬ್ ಮತ್ತು ಬಂಗಾಲಗಳ ಭಾಗಗಳನ್ನು ಶತ್ರುಗಳಿಗೆ ಕಡಿದುಕೊಟ್ಟರು. ಯಾವ ನದಿಯ ದಡದಲ್ಲಿ ನಮ್ಮ ಪೂರ್ವಜರು ವೇದ ಘೋಷದ ಅಮರಗಾನ ಗೈದರೋ, ಯಾವ ಪಾವನ ಪ್ರವಾಹದ ಹೆಸರಿನಿಂದ ನಮ್ಮನ್ನು ಹಾಗೂ ನಮ್ಮ ದೇಶವನ್ನು 'ಹಿಂದು', 'ಹಿಂದುಸ್ಥಾನ' ಎಂದು ಕರೆಯಲಾಯಿತೋ, ಆ ಸಿಂಧುವಿನ ಜಲವನ್ನು ಸ್ಪರ್ಶಿಸುವ ಅಧಿಕಾರ ಸಹ ಇಂದು ನಮಗಿಲ್ಲ. ತಕ್ಷಶಿಲಾ, ಪೆಶಾವರ್ ಇಂದು ನಮ್ಮ ಕೈಬಿಟ್ಟು ಹೋಗಿವೆ. ಕಾಶ್ಮೀರದ ಅರ್ಧಕ್ಕಿಂತಲೂ ಹೆಚ್ಚು ಭಾಗ ಆಕ್ರಮಿತವಾಗಿದೆ. ಮಾತೃಭೂಮಿಯ ಭಗ್ನ, ನಗ್ನ, ಹೃದಯಭೇದಕ ದೃಶ್ಯ ನಮಗೆ ಒಮ್ಮೆಯಾದರೂ ನೆನಪಾಗುತ್ತದೆಯೇ? ಆ ನೆನಪಿನಿಂದ ಮನಸ್ಸಿಗೆ ನೋವು, ಹೃದಯಕ್ಕೆ ದುಃಖ ತಾಗುತ್ತದೆಯೇ? ನಾವು ಜೀವಂತರಿದ್ದೇವೆ; ಬುದ್ಧಿವಂತರೆಂದು ಹೇಳಿಕೊಂಡು ಬಹಳ ಗರ್ವದಿಂದ ಓಡಾಡುತ್ತೇವೆ; ನಾವು ಜೀವಿಸಿದ್ದೂ, ನಮ್ಮ ಕಣ್ಣೆದುರಿಗೇ ದೇಶದ ವಿಭಜನೆಯೇ? ಛೀ, ಈ ಜೀವನಕ್ಕೆ ಧಿಃಕ್ಕಾರ! ಎಂಬ ವಿಚಾರ ಯಾವಾಗಲಾದರೊಮ್ಮೆ ಹೃದಯವನ್ನು ಸುಡುತ್ತದೆಯೇ?

## ಆಕ್ರಮಣವಿನ್ನೂ ನಿಂತಿಲ್ಲ

ಪಾಕಿಸ್ತಾನದ ಗಡಿಯುದ್ದಕ್ಕೂ ದಿನನಿತ್ಯ ಗುಂಡುಗಳು ನಮ್ಮಕಡೆ ಹಾರುತ್ತಿವೆ; ಚೀನಾ ಕಮ್ಯೂನಿಸ್ಟ್ ಸೇನೆಗಳು ಹಿಮಾಲಯಗಳನ್ನು ಹಾದು

ನೇಫಾ ಪ್ರದೇಶದ ಕೆಲವು ಭಾಗಗಳು ಹಾಗೂ ಲಡಾಕ್‌ನ ಅರ್ಧ ಭಾಗವನ್ನು ವಶಪಡಿಸಿಕೊಂಡಿವೆ; ಇತ್ಯಾದಿ ಸಮಾಚಾರಗಳನ್ನು ವೃತ್ತಪತ್ರಿಕೆಗಳಲ್ಲಿ ದಿನನಿತ್ಯ ಓದುತ್ತಲೇ ಇದ್ದೇವೆ. ಇದಕ್ಕಿಂತ ರಾಷ್ಟ್ರಕ್ಕೆ ದೊಡ್ಡ ಆಪತ್ತು ಇನ್ನಾವುದಿದೆ? ೧೨ವರ್ಷಗಳು ಕ್ರಿಶ್ಚಿಯನ್ನರ ನೇತೃತ್ವದಲ್ಲಿ ದಂಗೆನಡೆಸಿದನಂತರ ಈಗ ನಾಗಾ ವಿದ್ರೋಹಿಗಳು ಒಂದು ಅರ್ಧಸ್ವತಂತ್ರ ನಾಗಾ ರಾಜ್ಯವನ್ನು ರಚಿಸಹೊರಟಿದ್ದಾರೆ; ಇಷ್ಟರಲ್ಲೇ ಅದು ಪೂರ್ಣ ಸ್ವತಂತ್ರವೂ ಆದೀತು. ಇದು ಎಷ್ಟೊಂದು ಅಪಮಾನದ, ಸಂಕಟದ ಸಂಗತಿ? ಆಕ್ರಮಣಗಾರರು ಮನೆಯೊಳಗೆ ನುಗ್ಗಿ ಉದ್ದಂಡತೆಯಿಂದ ವರ್ತಿಸುತ್ತಿದ್ದಾರೆ. ನಾವು ಗಳಾದರೋ– "ಪ್ರಿಯ ಬಂಧು, ನಮ್ಮ ಮನೆಯೊಳಗೇಕೆ ಬಂದೆ? ದಯವಿಟ್ಟು ಹಿಂದಿರುಗುವೆಯಾ?" ಇತ್ಯಾದಿ ಪತ್ರ ಬರೆಯುತ್ತೇವೆ. ಒಮ್ಮೊಮ್ಮೆ ಉಗ್ರ ಪ್ರತಿಭಟನೆ ಸಹ ಕಳುಹಿಸುತ್ತೇವೆ, ಅಷ್ಟೆ. ಈ ಆಕ್ರಮಣಗಳು ನಮ್ಮ ರಾಷ್ಟ್ರೀಯ ಸಾರ್ವಭೌಮತೆಗೊಂದು ಸವಾಲಿನಂತಿವೆ. ಅದನ್ನೆದಿರಿಸದಿರುವುದು ನಮ್ಮೆಲ್ಲರ ಪೌರುಷಕ್ಕೊಂದು ದೊಡ್ಡ ಕಳಂಕ, ತೊಳೆಯಲಾರದ ಅಪಮಾನ ಎನಿಸುತ್ತದೆಯೇ? ಹಾಗೆನಿಸಿದ ಪಕ್ಷದಲ್ಲಿ – ಸ್ವಲ್ಪವಾದರೂ ದೇಶಭಕ್ತಿ ಇದೆ – ಎಂದು ಹೇಳಬಹುದು. ಆದರೆ ಎಲ್ಲೋ ಒಬ್ಬಿಬ್ಬರನ್ನು ಬಿಟ್ಟರೆ, ಸಾಧಾರಣ ಜನತೆಯಂತಿರಲಿ, ದೊಡ್ಡ ದೊಡ್ಡ ನಾಯಕರಿಗೆ ಸಹ ಆಕ್ರಮಣಗಳು ರಾಷ್ಟ್ರಕ್ಕೊಂದು ಕಲಂಕವೆಂಬ ವಿಚಾರವೇ ಇಲ್ಲ.

## ಸಂಧಾನವಲ್ಲ, ಶರಣಾಗತಿ!

ಇಂದು ನಮ್ಮ ನಾಯಕರು ಸಂಧಾನ ನಡೆಸುತ್ತೇವೆನ್ನುತ್ತಾರೆ. ಏನು ನಡೆಸುತ್ತಾರೋ ನೋಡೋಣ ಆದರೆ ಸಂಧಾನ ಯಾವಾಗ ಸಫಲವಾದೀತು? – ರಾಷ್ಟ್ರ ಸಬಲವಾಗಿದ್ದಾಗ ಮಾತ್ರ. ದುರ್ಬಲನಿಗೆ ಎಳ್ಳು ಕಾಳಿನಷ್ಟೂ ಬೆಲೆಯಿಲ್ಲ. ಸಂಧಾನದ ಹೆಸರಿನಲ್ಲಿ ಇತ್ತೀಚಿಗೆ ನಮ್ಮ ನಾಯಕರು ನಾಲ್ಕಾರು ಗ್ರಾಮಗಳನ್ನು ಪಾಕಿಸ್ತಾನಕ್ಕೆ ಕೊಡಲು ಒಪ್ಪಿದ್ದಾರೆ. ಅಸ್ಸಾಮಿನ ಗಡಿಯಲ್ಲಿ ಕೆಲವು ಅರಣ್ಯ ಪ್ರದೇಶಗಳನ್ನು ಕೊಡಲಿದ್ದಾರೆ. ಆ ಪ್ರದೇಶದಲ್ಲಿರುವ ಸುಮಾರು ಆರೇಳು ಗ್ರಾಮಗಳು ನಮ್ಮಿಂದ ಹೊರಟು

ಹೋಗುತ್ತವೆ. ಅವರ ಆಕ್ರಮಣದಲ್ಲಿ ಅವರು ಸಫಲರಾದರೆಂಬುದೇ ಇದರ ಅರ್ಥ. ಆದರೆ ಅಲ್ಲಿ ಗ್ರಾಮಗಳಿವೆಯೆಂಬುದೇ ತಮಗೆ ತಿಳಿದಿರಲಿಲ್ಲವೆಂದು ಪ್ರಧಾನಿಗಳು ಮತ್ತು ಗೃಹಮಂತ್ರಿಗಳಿಂದ ಹಿಡಿದು ಎಲ್ಲ ನಾಯಕರೂ ಹೇಳುತ್ತಾರೆ. ಎಂದರೆ ತಿಳಿದಿದ್ದೂ ಸುಳ್ಳು ಹೇಳಿರಬೇಕು. ಅಥವಾ ನಾಯಕರಾಗಲು ತಮ್ಮ ಅಪಾತ್ರತೆಯ ಪರಿಚಯ ಮಾಡಿಕೊಟ್ಟಿದ್ದಾರೆ. ಇದು ಮಾತೃಭೂಮಿಯ ಭಕ್ತಿಯ ಲಕ್ಷಣವಂತೂ ಅಲ್ಲ. ತಾಯ್ನಾಡಿನ ಸ್ಪಷ್ಟ, ಶುದ್ಧ ಜ್ಞಾನ, ರಾಷ್ಟ್ರಜೀವನದ ಧಾರೆ ಹಾಗೂ ಸಾಮರ್ಥ್ಯಗಳ ದಿವಾಳಿತನವನ್ನು ಇದು ತೋರಿಸುತ್ತದೆ. ಇದೇ ರೀತಿ, ಪಂಚಶೀಲಕ್ಕೆ ಮೊದಲ ಸಹಿ ಚೌಎನ್-ಲೈದಾಗಿದೆ. ಆದರೆ ಪಂಚಶೀಲವು ತಿಪ್ಪೆಗೆಸೆಯಲು ಯೋಗ್ಯವೆಂದು ಆತನೇ ಸಿದ್ಧಮಾಡಿದ್ದಾನೆ. "ನಾನೇನಾದರೂ ಪಂಚಶೀಲವನ್ನು ಭಂಗಗೊಳಿಸಿದರೆ ಭಾರತವು ನನ್ನನ್ನು ಕಿವಿ ಹಿಡಿದು ಬೀದಿಗೆಳೆದೀತು" ಎಂಬ ಭಯ ಆತನಿಗಿಲ್ಲ.

## ಈ ತಾಯಿ ಚೈತನ್ಯಮಯಿ

ನಮ್ಮ ಪೂರ್ವಜರು ಈ ಭೂಮಿಯನ್ನು ಚೈತನ್ಯಮಯೀ, ಧರ್ಮಮಯೀ, ಪುಣ್ಯಮಯೀ ಎಂದು ಶ್ರದ್ಧಾಭಕ್ತಿಗಳಿಂದ ಕಂಡರು. ಇಲ್ಲಿನ ಧೂಳಿನ ಕಣಕಣವೂ ಪವಿತ್ರವೆಂದು, ಜಲದ ಬಿಂದು-ಬಿಂದುವೂ ಪಾಪಪರಿಹಾರಕವೆಂದು, ಪರ್ವತದ ಶೃಂಗಶೃಂಗಗಳೂ ಭಗವಂತನ ಸ್ವರೂಪವೆಂದು, ವೃಕ್ಷ-ಶಿಲೆ, ಪಶು-ಪಕ್ಷಿಗಳೆಲ್ಲವನ್ನೂ ದೈವತ್ವದ ಪ್ರಕಟೀಕರಣವೆಂದು ಭಾವಿಸಿದರು. ಮಹರ್ಷಿ ಅರವಿಂದರು "ಭಾರತವು ಚೈತನ್ಯಮಯೀ ಜಗಜ್ಜನನಿ, ಆದಿಮಾಯಾ, ಪ್ರತ್ಯಕ್ಷ ನನ್ನ ಮಾತೆ" ಎಂದಿದ್ದಾರೆ. ಆದರೆ ಸಂಸ್ಕಾರಹೀನ, ಸ್ವಯಂ ಮಣ್ಣಿನದಾದ ಬೊಂಬೆಗೆ ಈ ಭೂಮಿಯ ಬಗ್ಗೆ ಮಾತೃಭಾವನೆ ಜಾಗೃತವಾಗುವುದಾದರೂ ಹೇಗೆ ? ಅದರ ಕಣ್ಣಿಗೆ ಕೇವಲ ಮಣ್ಣು ಕಲ್ಲುಗಳೇ ಕಾಣುತ್ತವೆ.

## ದೇಶಭಕ್ತಿಯ ಅಭಾವ

"ಇದಾದರೋ ಕೇವಲ ಕಲ್ಲು ಮಣ್ಣು ; ಇದನ್ನು ಮಾತೆಯೆನ್ನುವುದು ಮೂರ್ಖತನ" ಎಂದು ದೇಶದ ಆಗುಹೋಗುಗಳ ಬಹುದೊಡ್ಡ ಜವಾಬ್ದಾರಿ

ಹೊತ್ತಿರುವ ನಮ್ಮ ಪ್ರಧಾನಿಗಳೇ ಹೇಳುತ್ತಾರೆ. ಮಣ್ಣುಕಲ್ಲುಗಳೆಂಬ ಇಂಥ ಹೀನಭಾವನೆ ಇದ್ದುದರಿಂದಲೇ ದೇಶದ ವಿಭಜನೆ ಆಯಿತು. ಆದರಿಂದ ಅವರಿಗೆ ದುಃಖವೆನಿಸಲಿಲ್ಲ. ಆ ಪಾಪಕ್ಕೆ 'ಅಣ್ಣ-ತಮ್ಮಂದಿರ ಪಾಲುಗಾರಿಕೆ' ಎಂದು ಹೆಸರು ಕೊಟ್ಟರು. ಅಣ್ಣ-ತಮ್ಮಂದಿರಲ್ಲಿನ ಪಾಲುಗಾರಿಕೆಯಾದರೆ ಮನೆ, ಭೂಮಿ, ಹಣವನ್ನು ಹಂಚಿಕೊಳ್ಳುತ್ತಾರೆ. ದನಕರುಗಳಿದ್ದರೆ ಅವುಗಳನ್ನು ಸಹ ತುಂಡರಿಸದೆ ಇಡಿಯಾಗಿಯೇ ಹಂಚಿಕೊಳ್ಳುತ್ತಾರೆ. ಆದರೆ ಮಾತೆಯನ್ನು ಕಡಿದು ಹಂಚಿಕೊಳ್ಳುವ ವಿಚಿತ್ರ ಪಾತಕ ಕೃತ್ಯ ಭಾರತದಲ್ಲಿ ಮಾತ್ರ ನಡೆದಿದೆ. ಮುಸಲ್ಮಾನರು ಸದಾ ಗಲಾಟೆ ಮಾಡುತ್ತಿರುತ್ತಾರೆ; ಆದ್ದರಿಂದ ಅವರಿಗೆ ಪಾಲುಕೊಟ್ಟು ಕಳುಹಿಸಿಬಿಟ್ಟೆವು ಎಂದು ಒಬ್ಬ ದೊಡ್ಡ ನಾಯಕರು ಇಂಗ್ಲಿಷಿನಲ್ಲಿ ಹೇಳಿದರು. ನಾನು ಸಹ ಇಂಗ್ಲಿಷಿನ ಒಂದು ಸಣ್ಣ ವಾಕ್ಯವನ್ನು ತಿಳಿಸಿದೆ: ''Don't live in a fool's paradise'' ಎಂದು. ಆ ಮಾತು ವಿಭಜನೆಯ ನಂತರ ನಿತ್ಯವೂ ಸಿದ್ಧವಾಗುತ್ತಿದೆ. "ಆದದ್ದು ಆಗಿಹೋಯಿತು, ಅದನ್ನು ಮರೆತುಬಿಡಿ" ಎಂದು ಹೇಳುತ್ತಾರೆ. ಆದರೆ ಯಾರ ಹೃದಯದಲ್ಲಿ ಮಾತೃಭಕ್ತಿಯಿದೆ, ದೇಶಪ್ರೇಮವಿದೆ, ಆತನು ಈ ಘಾತಕವನ್ನೆಂದಿಗೂ ಮರೆಯಲಾರ. ಅವನಾದರೋ ಈ ಅಪಮಾನವನ್ನು ತೊಡೆದುಹಾಕಲು ನಿರಂತರ ಪ್ರಯತ್ನಶೀಲನಾಗುತ್ತಾನೆ. ರಾಷ್ಟ್ರನಿಷ್ಠೆಯಿಲ್ಲದೆ ಸ್ವಾರ್ಥದಲ್ಲಿ ಮಗ್ನರಾಗಿ ಆಕ್ರಮಣಕಾರರೊಡನೆಯೇ ಸೇರಿ ಅವರಿಗೇ ಬೆಂಬಲ ನೀಡುವವರೂ ನಮ್ಮ ಸಮಾಜದಲ್ಲಿರುವುದು ನಮ್ಮ ದೌರ್ಭಾಗ್ಯದ ಸಂಗತಿಯಾಗಿದೆ. ಸ್ತ್ರೀಯರೂ ಅಲ್ಲದ, ಪುರುಷರು ಮೊದಲೇ ಅಲ್ಲದ ಅಂಥವರಿಗೆ ಏನು ತಾನೇ ಹೇಳಬಹುದು?

"ಏತಾವಾನೇವ ಪುರುಷಃ ಯದಮರ್ಷೀ ಯದಕ್ಷಮೀ
ಕ್ಷಮಾವಾನ್ ನಿರಮರ್ಷಶ್ಚ ನೈವ ಸ್ತ್ರೀ ನ ಪುನಃ ಪುಮಾನ್ ‖"

## ಮಾತೃಭಾವನೆಯ ಹತ್ಯೆ

ಪ್ರಧಾನಿಗಳು ಆಡಿರುವ ಮಾತಿನಿಂದ ಮಾತೃತ್ವದ ಭಾವನೆಯ ಕೊಲೆಯಾಗಿದೆ. ಅದು ಮಾತೃಭೂಮಿಯ ಬಗ್ಗೆ ಜನತೆಗಿರುವ ಶ್ರದ್ಧೆ, ವಿಶ್ವಾಸಗಳನ್ನು ನಾಶಮಾಡುತ್ತದೆ. ರಾಷ್ಟ್ರದ ಬಗ್ಗೆ ಮಾತೃಭಾವನೆ ಇಲ್ಲವಾದರೆ,

ಆಕ್ರಮಣ ನಡೆದಾಗ ಅಂತಃಕರಣದಲ್ಲಿ ದುಃಖ, ತಳಮಳ ಹೇಗಾಗುತ್ತದೆ? ಆಗಲಾರದು. ಆಗ ಆಕ್ರಮಣವಾದರೂ ಒಳ್ಳೆಯದೆ, ಆಗದಿದ್ದರೂ ಒಳ್ಳೆಯದೆ; ಪರಕೀಯರೇ ರಾಜರಾದರೆ ಮತ್ತೂ ಒಳ್ಳೆಯದು; ಆದರೆ ತಮಗೆ ಮಾತ್ರ ಸ್ವಲ್ಪ ಧನ, ಅಧಿಕಾರ ಸಿಕ್ಕಿದರಾಯಿತು - ಇಂತಹ ಅತ್ಯಂತ ಘೃಣಾಸ್ಪದ ಪ್ರವೃತ್ತಿ ಜನತೆಯಲ್ಲಿ ಬೆಳೆಯುತ್ತದೆ. ಇದರಿಂದಲೇ ಇಂದು ನಾವು ಈ ರೀತಿಯ ಶ್ರದ್ಧಾವಿಹೀನತೆಯನ್ನು ಕಾಣುತ್ತಿದ್ದೇವೆ. ತಾಯ್ನೆಲದ ಬಗ್ಗೆ ಭಕ್ತಿಯಿಲ್ಲವಾದಲ್ಲಿ ರಾಷ್ಟ್ರೀಯ ಏಕತೆ ಹಾಗೂ ಜಾಗೃತಿ ಸಾಧ್ಯವಿಲ್ಲ. ಆಗ ನಾವು ಹೊರಗಿನ ಆಕ್ರಮಣಗಳನ್ನು ತಡೆಯಲಾರೆವು. ಹಿಮಾಲಯದ ಮಹಾ ಪರ್ವತಶ್ರೇಣಿಗಳೆಂದರೆ ನಿರ್ಜನವಾದ, ಹುಲ್ಲುಕೂಡಾ ಹುಟ್ಟದ ಮಂಜಿನ ಗುಡ್ಡಗಳೆಂದು ನಮ್ಮ ಪ್ರಧಾನಿಗಳು ಭಾವಿಸುತ್ತಾರೆ. ರಾಷ್ಟ್ರೀಯ ಅರಿವಿಲ್ಲದವರಿಂದಲೇ ಇಂಥ ಮಾತು ಬರಬಲ್ಲದು. ಭಾರತದ ಒಂದೊಂದು ಕಣವೂ ಪವಿತ್ರವಾದುದಾಗಿದೆಯೆಂಬ ಶ್ರದ್ಧೆಯಿದ್ದಲ್ಲಿ ಮಾತ್ರ ನಾವು ಪ್ರಾಣ ಪಣದಿಂದಲಾದರೂ ನಮ್ಮ ಗಡಿಗಳನ್ನು ರಕ್ಷಿಸಬಲ್ಲೆವು. ದೇಶದ ಬಗ್ಗೆ ಮಾತೃ ಭಾವನೆಯ ಈ ಮರೆವಿನ ದುಷ್ಪರಿಣಾಮಗಳು ರಾಷ್ಟ್ರದೊಳಗೂ ಆಗದೆ ಇಲ್ಲ.

## ಕುಟುಂಬ ಭಾವನೆಯ ವಿಸ್ಮರಣೆ

ಹೊರಗಿನಿಂದಲಂತೂ ಶತ್ರುಗಳು ಆಕ್ರಮಣ ನಡೆಸುತ್ತಲೇ ಇದ್ದಾರೆ; ಒಂದೊಂದೇ ಭಾಗಗಳು ನಮ್ಮ ಕೈಬಿಟ್ಟು ಹೋಗುತ್ತಿವೆ. ದೇಶದ ಒಳಗಾದರೂ ಜನತೆ ಸಂಘಟಿತರಾಗಿದ್ದಾರೆಯೇ? ಅದೂ ಇಲ್ಲ. ಭಾರತ ಹಿಂದೂರಾಷ್ಟ್ರವೆಂಬ ವಿಚಾರ ಹಾಗೂ ಅದರ ಬಗ್ಗೆ ಮಾತೃಭಾವನೆ ಲುಪ್ತವಾಗುತ್ತಿದ್ದಂತೆಯೇ, ನಾವೆಲ್ಲರೂ ಒಂದೇ ಸಂತಾನ, ಏಕೈಕ ಅವಿಭಕ್ತ ಪರಿವಾರ ಎಂಬ ಸಮಗ್ರ ಆತ್ಮೀಯ ಭಾವನೆಯೂ ಉಳಿಯಲಿಲ್ಲ. ಪರಿಣಾಮವೇನಾಯಿತು? ಸ್ವಾರ್ಥ, ಅಧಿಕಾರದಾಹ, ಸ್ವಪ್ರತಿಷ್ಠೆ, ಅಂತಃಕಲಹ ಪ್ರಾರಂಭವಾಯಿತು. ಭಾಷೆ, ಪಕ್ಷ, ಪಂಥ, ಪ್ರಾಂತ ಇತ್ಯಾದಿ ಕ್ಷುದ್ರ ಸಂಗತಿಗಳೆಲ್ಲ ಪರಸ್ಪರ ಜಗಳದ ಸಾಧನಗಳಾದವು.

## ಭಾಷಾಕ್ಲೇಷ

ಭಾರತದಲ್ಲಿ ನಾವು ಅನೇಕ ಭಾಷೆಗಳನ್ನು ಬಳಸುತ್ತಿದ್ದೇವೆ. ಭಾರತ ನಮ್ಮದಾದುದರಿಂದ ಈ ಎಲ್ಲ ಭಾಷೆಗಳೂ ನಮ್ಮದೇ ಆಗಿವೆ. ಆದರೆ ಭ್ರಾತೃತ್ವ ಲುಪ್ತವಾದ ಕಾರಣ ಭಾಷಾವಿವಾದ, ಭಾಷಾದ್ವೇಶ ಪ್ರಾರಂಭವಾಯಿತು. ಭಾಷೆಗೊಂದೊಂದರಂತೆ ರಾಜ್ಯಗಳಾದವು. ಪ್ರಾಂತದ ಗಡಿ ಗ್ರಾಮಗಳು ಯಾವ ಕಡೆ ಸೇರಬೇಕೆಂಬ ಬಗ್ಗೆ ಜಗಳ, ಹೊಡೆದಾಟಗಳು ನಡೆದವು, ನಡೆಯುತ್ತಿವೆ. ಒಬ್ಬ ಮುಖಂಡರಂತೂ – ಎಲ್ಲಿಯವರೆಗೆ ಮಹಾರಾಷ್ಟ್ರ-ಕರ್ನಾಟಕ ಮತ್ತು ಮಹಾರಾಷ್ಟ್ರ-ಗುಜರಾತಿನ ಗಡಿವಿವಾದಗಳು ನಿರ್ಧಾರಗೊಳ್ಳುವುದಿಲ್ಲವೋ ಅಲ್ಲಿಯವರೆಗೆ – ಚೀನಾ ಆಕ್ರಮಣದ ಬಗ್ಗೆ ನಾವು ಚಿಂತಿಸುವುದಿಲ್ಲ ಎಂದಿದ್ದಾರೆ. ಮಾರ್ಗದರ್ಶನ ಮಾಡಲಿರುವ ನಾಯಕರ ಅವತಾರ ಇದು! ಗಡಿವಿವಾದ ನಿರ್ಧಾರಗೊಳ್ಳುವುದಕ್ಕೆ ಮೊದಲೇ ಚೀನಾ ಅವರ ಮನೆಯೊಳಕ್ಕೇ ಬಂದರೆ ಅವರಿಗೆ ಇನ್ನೂ ಹೆಚ್ಚಿನ ಆನಂದವೇ ಆಗುತ್ತದೆ. ಇದೆಂಥ ವಿವೇಕರಹಿತ ವಿಕೃತಿ!

## ದ್ರೋಹಿಗಳ ಬೆದರಿಕೆ

ಪಂಜಾಬಿನಲ್ಲಿ ಗುರುನಾನಕರಿಂದ ಹಿಡಿದು ಗುರುಗೋವಿಂದ ಸಿಂಹರವರೆಗೆ ಅನೇಕ ಶ್ರೇಷ್ಠ ಮಹಾಪುರುಷರು ಹಿಂದೂಸಮಾಜದ ರಕ್ಷಣೆಗಾಗಿ ಹಿಂದೂಸಮಾಜದೊಳಗೇ ಒಂದು ನವಜೀವನ ನಿರ್ಮಿಸಲು ಸಿಖ್ ಪಂಥವನ್ನು ಪ್ರಾರಂಭಿಸಿದರು. ಆದರೆ ಇಂದು ಅದೇ ಸಿಖ್ಖರು ತಾವು ಹಿಂದೂಗಳೇ ಅಲ್ಲವೆಂದು ಹೇಳಿಕೊಂಡು, ತಮಗೆ ಬೇರೆ ಪ್ರಾಂತವನ್ನೇ ಕೊಡಬೇಕೆಂದು ಒತ್ತಾಯಿಸುತ್ತಿದ್ದಾರೆ. ತಮ್ಮ ಒತ್ತಾಯವನ್ನು ಸಲ್ಲಿಸದಿದ್ದರೆ ತಾವು ಕಮ್ಯುನಿಷ್ಟರಾಗುವುದಾಗಿ ಅವರ ನಾಯಕ ಮಾಸ್ಟರ್ ತಾರಾಸಿಂಗ್ ಬೆದರಿಸುತ್ತಿದ್ದಾರೆ. ಇವರ ಅರ್ಥವೇನು? ಅವರು ಕೇಳುವ ಪಂಜಾಬಿ ಸುಭಾಕ್ಕೆ ಸೇರಿದ ಗಡಿ ಪ್ರಾಂತದಲ್ಲಿ ಚೀನಾ ಕಮ್ಯುನಿಸ್ಟ್ ಸೇನೆ ನುಗ್ಗಿದೆ. ತಾವು ಕಮ್ಯುನಿಷ್ಟರಾಗುತ್ತೇವೆಂದು ಹೇಳಿದರೆ ಚೀನಾಸೇನೆಗಳು ಬೇಗ ಮುಂದುವರಿದು ಬಂದು ತಮಗೆ ಪಂಜಾಬೀಸುಭಾ ಗೆದ್ದುಕೊಡುತ್ತವೆಂದು ಅವರು

ಭಾವಿಸಿದ್ದಾರು ! ಅವರು ಆಡಿರುವ ಮಾತಿನ ಅರ್ಥ ಇದೇ ಆಗಿದೆಯೆಂದು ನನಗನಿಸುತ್ತದೆ. ಅವರ ಮನಸ್ಸಿನಲ್ಲಿ ಇನ್ನೂ ವಿಪತ್ಕಾರಕ ಆಲೋಚನೆಗಳಿಷ್ಟಿವೆಯೋ, ನೆನೆಸಿಕೊಂಡರೇ ಮೈನಡುಗುತ್ತದೆ. ಎಂದರೆ ಸ್ವಾರ್ಥಸಾಧನೆಗಾಗಿ ಶತ್ರುಗಳ ಸಹಾಯ ತೆಗೆದುಕೊಂಡು ಸ್ವರಾಷ್ಟ್ರಕ್ಕೆ ದ್ರೋಹ ಬಗೆಯಲೂ ಸಹ ಸಿದ್ಧರಾಗಿರುವವರು ಇದ್ದಾರೆಂದು ಪ್ರತ್ಯಕ್ಷ ತಿಳಿದಂತಾಯಿತು.

## ಇಬ್ಬರ ಜಗಳ, ಮೂರನೆಯವನ ಲಾಭ

ಇನ್ನು ಜಾತಿಗಳ ಹೆಸರಿನಲ್ಲಿ ನಡೆಯುತ್ತಿರುವ ಸಂಘರ್ಷಗಳಿಗೆ ಲೆಕ್ಕವಿಲ್ಲ. ಒಂದೊಂದರ ನಡುವೆಯೂ ದ್ವೇಷ, ಅಸೂಯೆ, ವಿರೋಧಗಳು ತಾಂಡವವಾಡುತ್ತಿವೆ. ಒಂದು ಜಾತಿಯವರು ಮತ್ತೊಂದರ ವಿನಾಶಕ್ಕಾಗಿ ಅಹಿಂದುಗಳೊಡನೆ ಸೇರುವುದಕ್ಕೂ ಹಿಂದೆಗೆಯುವುದಿಲ್ಲ. ಸಂಘ ಪ್ರಾರಂಭವಾಗುವುದಕ್ಕೆ ಮೊದಲು ನಡೆದ ಒಂದು ಘಟನೆ ಹೇಳುತ್ತೇನೆ. ಆಗ ನಾಗಪುರ ಹಾಗೂ ದಕ್ಷಿಣದ ಅನೇಕ ಪ್ರಾಂತಗಳಲ್ಲಿ ಬ್ರಿಟಿಷರ ಪ್ರೇರಣೆಯಿಂದ ಬ್ರಾಹ್ಮಣ-ಬ್ರಾಹ್ಮಣೇತರರ ವಿವಾದ ಪ್ರಾರಂಭವಾಗಿತ್ತು. ಅದರ ಫಲವಾಗಿ ತಮ್ಮನ್ನು ಅಬ್ರಾಹ್ಮಣರೆಂದು ಕರೆದುಕೊಳ್ಳುವ ಕೆಲವು ನಾಯಕರು ನಾಗಪುರದಲ್ಲಿ ಒಂದು ಸಮ್ಮೇಳನ ನಡೆಸಿದರು. ಅದರಲ್ಲಿ ಕೆಲವು ಮುಸ್ಲಿಂ ಭಾಷಣಕಾರರೂ ಇದ್ದರು; ಕ್ರಿಶ್ಚಿಯನ್ನರೂ ಸಹ ಸೇರಿದ್ದರು. "ನಿಮ್ಮ ಈ ಸಮ್ಮೇಳನಕ್ಕೆ ಆ ಮುಸ್ಲಿಮರು, ಕ್ರಿಶ್ಚಿಯನ್ನರು ಹೇಗೆ ಬಂದರು ?" ಎಂದು ಆ ಸಮ್ಮೇಳನದಲ್ಲಿ ನನಗೆ ಪರಿಚಯವಿದ್ದ ಒಬ್ಬ ಹಿಂದೂ ಸಜ್ಜನರನ್ನು ಕೇಳಿದೆ. ಅದಕ್ಕೆ ಅವರು, "ಅವರೂ ಬ್ರಾಹ್ಮಣೇತರರು_Non-Brahmins" ಎಂದರು. "ಹಾಗಾದರೆ ಕತ್ತೆಯನ್ನೇಕೆ ನೀವು ಸೇರಿಸಿಕೊಳ್ಳಲಿಲ್ಲ ? ಅದೂ ಸಹ Non-Brahmin ! ನೋಡಿ, ಸಂಪೂರ್ಣ ಹಿಂದೂ ಸಮಾಜದ ವಿನಾಶಕ್ಕಾಗಿ ಸೊಂಟಕಟ್ಟಿ ನಿಂತಿರುವ ಪರಕೀಯ ಸಮಾಜದೊಂದಿಗೆ ನೀವು ಹೀಗೆ ಸೇರುತ್ತಿರುವುದು ಯೋಗ್ಯವೇ ?" ಎಂದೆ. ಬಹಳ ಹಿಂದೆ ಸಂಘ ಪ್ರಾರಂಭವಾಗುವುದಕ್ಕೆ ಮೊದಲು ನಡೆದ ಸಂಗತಿಯಿದು. ಆದರೆ ಆ ದುರ್ಭಾವನೆ ಈಗಲೂ ಸಹ ಇದೆ.

ದಕ್ಷಿಣದಲ್ಲಿ ದ್ರಾವಿಡ ಸ್ಥಾನದ ಬೇಡಿಕೆ ಮತ್ತು ಅದೇ ರೀತಿಯ ಇನ್ನಿತರ ಕಾರಣಗಳಿಗಾಗಿ ನಡೆಯುವ ಆಂದೋಳನಗಳಲ್ಲಿ ಕ್ರಿಶ್ಚಿಯನರದೇ ಪ್ರಮುಖ ಪಾತ್ರವಿದೆ. ಅದಕ್ಕೆ ಪ್ರೇರಣೆ ನೀಡಿ ಮಾರ್ಗದರ್ಶನ ಮಾಡುವ ಬುದ್ಧಿವಂತರೆಲ್ಲರೂ ಕ್ರಿಶ್ಚಿಯನರೇ ಆಗಿದ್ದಾರೆನ್ನಬಹುದು. ಹೀಗೆ ಅನೇಕ ಸ್ಥಾನಗಳಲ್ಲಿ ಪರಕೀಯರೊಡನೆ ಸೇರುವವರೆಗೆ ಸಂಘರ್ಷ ಬೆಳೆದಿದೆ. ಹಿಂದೂ ಸಮಾಜ ನಮ್ಮದೇ ಆಗಿದೆ; ಅಜ್ಞಾನದ ಫಲವಾಗಿ ಅದರೊಡನೆ ಹೋರಾಡಬೇಕಾದರೆ ಹೋರಾಡೋಣ; ಆದರೆ ಬೇರೆಯವರಿಗೆ ನಮ್ಮ ಮನೆಯೊಳಗೆ ಪ್ರವೇಶ ಕೊಡುವುದು ಒಳ್ಳೆಯ ಲಕ್ಷಣವಲ್ಲ, ಪರಸ್ಪರ ನಮ್ಮಲ್ಲಿ ಎಷ್ಟೇ ಸಂಘರ್ಷಗಳಿರಲಿ, ಪರಕೀಯರ ಎದುರಿನಲ್ಲಿ 'ವಯಂ ಪಂಚಾಧಿಕಂ ಶತಂ'– ನಾವು ನೂರೈದು ಜನ– ಅಂದರೆ ನಾವೆಲ್ಲರೂ ಒಂದೇ ಎಂಬುದನ್ನು ಮರೆಯಬಾರದು.

## ಅಪಾಯಕಾರಿ ವ್ಯಕ್ತಿಗಳು

ಹಿಂದೆ ನಮ್ಮ ಸ್ವಾರ್ಥಕ್ಕಾಗಿ ಪರಕೀಯರನ್ನು ಆಹ್ವಾನಿಸಿದೆವು. ನಮ್ಮ ಸಂಘರ್ಷಗಳಲ್ಲಿ ಸಣ್ಣಪುಟ್ಟ ಸ್ವಾರ್ಥಕ್ಕಾಗಿ ಪರಕೀಯರನ್ನು ಆಹ್ವಾನಿಸುವುದು, ಅವರ ಸಹಾಯ ಪಡೆಯುವುದು, ಅವರಿಗೆ ದೊಡ್ಡಸ್ಥಾನ, ಅಧಿಕಾರ ನೀಡುವುದು ನಮ್ಮ ತಲೆಯಮೇಲೆ ಕೂರಿಸಿಕೊಳ್ಳುವುದು ಇತ್ಯಾದಿ ನಡೆದೇ ಇದೆ. ಈ ಪ್ರವೃತ್ತಿ ಇಷ್ಟಕ್ಕೇ ನಿಲ್ಲದೆ ಇನ್ನೂ ಮುಂದುವರೆದು, ಕೆಲವು ಜವಾಬ್ದಾರಿಯುಳ್ಳ ವ್ಯಕ್ತಿಗಳೂ ಆಡಬಾರದುದನ್ನೆಲ್ಲ ಆಡುತ್ತಾರೆ. ಭಾಷಾವಾರು ಪ್ರಾಂತಗಳಿಗಾಗಿ ಜನರು ಚಳುವಳಿ ನಡೆಸುತ್ತಿದ್ದ ಸಮಯದಲ್ಲಿ ಓರ್ವ ಹಿರಿಯ ಕಾಂಗ್ರೆಸ್ ನಾಯಕರು ಹೇಳಿದ ಮಾತು ನನಗೆ ನೆನಪಿದೆ. "ಪಂ. ನೆಹರೂರ ಸರ್ಕಾರ ನಮಗೆ ಬೇರೆ ಪ್ರಾಂತ ಏರ್ಪಡಿಸಿಕೊಡದಿದ್ದಲ್ಲಿ, ರಷ್ಯಾವನ್ನು ಇಲ್ಲಿಗೆ ಆಹ್ವಾನಿಸಿ, ಅದರ ಸೈನ್ಯದ ಬಲದಿಂದ ನಮ್ಮ ರಾಜ್ಯವನ್ನು ಪಡೆದುಕೊಳ್ಳುತ್ತೇವೆ!" ಎಂದಿದ್ದರು ಅವರು. ಮಹಮುದ್ ಘೋರಿಯನ್ನು ಆಹ್ವಾನಿಸಿದ ಜಯಚಂದ್ರನನ್ನು ದೇಶದ್ರೋಹಿ ಎನ್ನುವುದಾದರೆ ಈ ನಾಯಕರಿಗೂ ಅದೇ ಹೆಸರು ಶೋಭಿಸುತ್ತದೆ.

ಮೊದಲು ಕೆಲವು ಪಾಳೇಗಾರರು ಹೆಚ್ಚು ರಾಜ್ಯಕ್ಕಾಗಿ ಜಗಳವಾಡು ತ್ತಿದ್ದರು. ಈಗ ಜಾತಿ, ಭಾಷೆ, ಪಕ್ಷಗಳ ಹೆಸರಿನಲ್ಲಿ ಪ್ರತಿಯೊಬ್ಬನೂ ಕಾದಾಡುತ್ತಿದ್ದಾನೆ. ಪ್ರತಿಯೊಬ್ಬನೂ ಮಾತೃಭೂಮಿಯಿಂದ ಸಿಡಿದು ದೂರ ವಾಗಲೆಣಿಸುತ್ತಿದ್ದಾನೆ. ನಾವು ನಮ್ಮದೇ ಹಿಂದೂ ಜೀವನವನ್ನು ಅಂತ್ಯ ಗೊಳಿಸುತ್ತಿದ್ದೇವೆ. ಈ ಮಾತು ಕರ್ಕಶ, ಆದರೂ ಸತ್ಯ. ನಾವು ಸತ್ಯವ ನ್ನೊಪ್ಪಲೇಬೇಕು. ಅನೈಕ್ಯತೆಯಿಂದಾಗಿ ನಾವಿಂದು ಈ ದುಃಸ್ಥಿತಿಗಿಳಿದಿ ದ್ದೇವೆ. ಇಷ್ಟು ಸಾಕು, ನಾವಿನ್ನು ಅದನ್ನು ಸಹಿಸಲಾರೆವು. ನಮ್ಮ ನಾಯ ಕರು ಇದೇ ರೀತಿ ವಿಭಜನೆ ಹಾಗೂ ಅನೈಕ್ಯತೆಯನ್ನು ಮುಂದುವರಿಸುವು ದಾದರೆ ನಮ್ಮ ಪಾಲಿಗೆ ಅವರಿದ್ದರೂ ಇಲ್ಲದಂತೆ; ಅವರಿಂದ ನಮಗಾಗ ಬೇಕಾದ್ದೇನೂ ಇಲ್ಲ. ನಮ್ಮ ರಾಷ್ಟ್ರವನ್ನೆತ್ತಲು ಯಾರೂ ಪ್ರಯತ್ನಿಸುತ್ತಿಲ್ಲ. ಜನತೆಯಲ್ಲಿ ಸಂಸ್ಕೃತಿ, ಚಾರಿತ್ರ್ಯ, ಹಾಗೂ ಮನೋದಾರ್ಢ್ಯಗಳು ಮರೆಯಾ ಗಿವೆ. ಎಲ್ಲ ಯೋಜನೆಗಳಲ್ಲೂ ಅನೀತಿ ಹಾಗೂ ದುರ್ವ್ಯವಹಾರಗಳೇ ತುಂಬಿವೆ. ಈ ಅನೈತಿಕತೆಯಿಂದಲೇ ದೇಶದ ಆರ್ಥಿಕ ಪ್ರಗತಿ ಸಹ ವಿಫಲ ಗೊಂಡಿದೆ.

## ಬ್ರಿಟಿಷ್ ನಿರ್ಮಿತ ನಾಯಕವರ್ಗ

ನಮ್ಮ ರಾಷ್ಟ್ರದಲ್ಲಿನ ಇಷ್ಟೆಲ್ಲ ಒಡಕು ಹಾಗೂ ಹೀನಸ್ಥಿತಿಗೆ ಏಕಾತ್ಮತೆಯ ಅಭಾವ ಹಾಗೂ ಇತಿಹಾಸದ ವಿಸ್ಮರಣೆಯೇ ಕಾರಣವೆಂದು ತಿಳಿದುದಾಯಿತು. ಈ ವಿಸ್ಮರಣೆಗೆ ಆಂಗ್ಲೇಯರ ಕಾಣಿಕೆ ಕಡಿಮೆಯೇನಿಲ್ಲ. ವಾಸ್ತವಿಕವಾಗಿ ಅದರಲ್ಲಿ ಅವರದ್ದೇ ಮಹತ್ವದ ಪಾತ್ರವಿದೆ. ಬ್ರಿಟಿಷರು ತಮ್ಮ ಇನ್ನೂರು ವರ್ಷಗಳ ಆಳ್ವಿಕೆಯಲ್ಲಿ ನಮ್ಮಲ್ಲಿದ್ದ ರಾಷ್ಟ್ರೀಯ ಭಾವನೆಯನ್ನು ನಿರ್ಮೂಲ ಗೊಳಿಸಿ, ಆತ್ಮಹೀನತೆಯನ್ನು ತುಂಬಲು ಪ್ರಯತ್ನಿಸಿದರು. ನಮಗೆ ರಾಷ್ಟ್ರೀಯ ಏಕತೆಯ ಜ್ಞಾನವಿಲ್ಲವೆಂದೂ, ಬ್ರಿಟಿಷರು ಆಡಳಿತ ಸ್ಥಾಪಿಸಿದ ನಂತರವೇ ಪ್ರಥಮಬಾರಿಗೆ ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಭಾರತ ಒಂದಾಯಿತೆಂದೂ ಹೇಳಿಕೊಟ್ಟರು. ಈ ದೇಶದವರು ಬ್ರಿಟಿಷ ರಂತೆಯೇ ಆಕ್ರಮಣಕಾರಿಗಳಾಗಿ ಬಂದು ವಸಾಹತು ಸ್ಥಾಪಿಸಿದವರೆಂದೂ,

ನಿಜವಾದ ಮೂಲನಿವಾಸಿಗಳನ್ನು ಬೆಟ್ಟಗುಡ್ಡಗಳಿಗೆ ಅಟ್ಟಲಾಗಿದೆಯೆಂದೂ, ಕಲಿಸಿದರು. ನಮಗೆ ನಮ್ಮದೆನಿಸಿಕೊಳ್ಳುವ ಯಾವ ಸಂಸ್ಕೃತಿಯೂ ಇರಲಿಲ್ಲ, ಹಾಗೂ ಮೊದಲು ಇಲ್ಲಿನ ಜನರು ಮೃಗಗಳಂತೆ ಜೀವಿಸುತ್ತಿದ್ದರು ಎಂದೂ ಬೋಧಿಸಿ, "ಅಂಧಕಾರಯುಗ – Age of Darkness" ಎಂದು ಕರೆದರು. ನಮಗೊಂದು ರಾಷ್ಟ್ರೀಯ ಜೀವನವಿರಲಿಲ್ಲವೆಂಬ ತಪ್ಪು ವಿಚಾರವನ್ನು ನಿರ್ಮಿಸಲು ಈ ರೀತಿಯ ಪ್ರಯತ್ನಗಳು ನಡೆದರೂ, ಆ ಮಿಥ್ಯಾಪ್ರಚಾರ ಫಲಿಸಲಿಲ್ಲವೆಂದು ಪಾಶ್ಚಾತ್ಯ ವಿದ್ವಾಂಸರೂ ಈಗೀಗ ಅರಿತುಕೊಳ್ಳುತ್ತಿದ್ದಾರೆ. ಆದ್ದರಿಂದ, ಪ್ರಪಂಚಕ್ಕೆ ಬಟ್ಟೆ ಹಾಗೂ ಬೆಂಕಿಯ ಪರಿಚಯವಿಲ್ಲದೆ ಅನ್ಯಪ್ರದೇಶಗಳಲ್ಲಿನ ಜನರು ಹಸಿಮಾಂಸವನ್ನೇ ಕಿತ್ತುತಿನ್ನುತ್ತಿದ್ದ ಕಾಲಕ್ಕೂ ಮೊದಲೇ ಈ ಭೂಮಿಯ ಪುತ್ರರಾದ ಹಿಂದುಗಳು ಉದಾತ್ತ ಧರ್ಮ, ಸಂಸ್ಕೃತಿಗಳನ್ನು ಹೊಂದಿದ್ದರು ಮತ್ತು ಇಡೀ ಮಾನವತೆಗೇ ಭೂಷಣಪ್ರಾಯವಾದಂಥ ಸಾಮರ್ಥ್ಯಸಂಪನ್ನ, ವೈಭವಶಾಲಿ ರಾಷ್ಟ್ರವನ್ನು ಸ್ಥಾಪಿಸಿದ್ದರು ಎಂಬ ಸತ್ಯವನ್ನು ಪ್ರಾಮಾಣಿಕ ವ್ಯಕ್ತಿಗಳು ಒಪ್ಪಿಕೊಳ್ಳತೊಡಗಿದ್ದಾರೆ. ಆದರೂ ಬ್ರಿಟಿಷರ ಕುತಂತ್ರ ಫಲಿಸದಿರಲಿಲ್ಲ. ಅವರ ಕೈಕೆಳಗೆ ತಯಾರಾದ ನಮ್ಮ ಇಂದಿನ ನಾಯಕವರ್ಗದವರು ಅವರು ಹೇಳಿಕೊಟ್ಟುದನ್ನು ಚಾಚೂ ತಪ್ಪದೆ ಕಲಿತರು. ನಾವೊಂದು ರಾಷ್ಟ್ರವಲ್ಲ, ನಮಗೆ ಧರ್ಮ ಸಂಸ್ಕೃತಿಗಳಿರಲಿಲ್ಲವೆಂದೂ ನಂಬಿದರು. ನಮ್ಮದಿನ್ನೂ ಅಪಕ್ವ ರಾಷ್ಟ್ರ (We are a nation in the making) ಎಂದು ಜನರಿಗೆ ಬೋಧಿಸಲು ಮೊದಲು ಮಾಡಿದರು. ಹಿಂದೂ ಭಾವನೆ ಜಾಗೃತವಾಗುವುದು ಬ್ರಿಟಿಷರಿಗೆ ಬೇಕಿರಲಿಲ್ಲ. ತಾವು ತಯಾರು ಮಾಡಿದ್ದವರ ಕೈಯಲ್ಲೇ ದೇಶವನ್ನು ಕೊಟ್ಟುಹೋಗಲು ಬಯಸಿದರು. ಬ್ರಿಟಿಷರ ಸಂಸ್ಕಾರ ಹಾಗೂ ಇತಿಹಾಸದ ಅಜ್ಞಾನದ ಫಲವಾಗಿ, ಅವರು ಬಿಟ್ಟುಹೋದಾಗ ನಮ್ಮ ನಾಯಕರಲ್ಲಿ ನಮ್ಮ ಭವ್ಯಪರಂಪರೆ ಹಾಗೂ ಪೂರ್ವದ ಅಸ್ತಿತ್ವದ ತಿಳುವಳಿಕೆ ಶೂನ್ಯವಾಗಿತ್ತು. ಪ್ರಾಚೀನ ಕಾಲದಿಂದಲೂ ಈ ರಾಷ್ಟ್ರದ ಪ್ರತೀಕವಾದ ಭಗವಾಧ್ವಜವು ಅವರಾರಿಗೂ ನೆನಪಾಗಲಿಲ್ಲ. ಅದರ ಪರಿಣಾಮವೆಂದರೆ, ರಾಷ್ಟ್ರಕ್ಕೆ ಒಂದು ಹೊಸ ಪ್ರತೀಕ ಸೃಷ್ಟಿಸತೊಡಗಿದರು ಮತ್ತು ಮೂರು ಕಾಲ್ಪನಿಕ ಬಣ್ಣಗಳ ಧ್ವಜ ಬಂದಿತು. ಇದರ

ರ್ಥವೆಂದರೆ, ನಮಗೆ ಪರಂಪರೆ, ಇತಿಹಾಸ, ಧರ್ಮ, ಸಂಸ್ಕೃತಿಗಳನ್ನೊಳ
ಂಡ ರಾಷ್ಟ್ರವು ಹಿಂದೆ ಇರಲೇ ಇಲ್ಲವೆಂದು ನಾವೇ ಒಪ್ಪಿಕೊಂಡಂತೆ,
ರಿಟಿಷರು ಕಲಿಸಿದ ಮಿಥ್ಯೆಗೆ ಕೈ ಎತ್ತಿದಂತೆ ಆಯಿತು. ಭಾರತದ ರಾಷ್ಟ್ರೀಯ
ೀವನಕ್ಕಾದ ಘೋರ ಅಪಚಾರ ಇದು. ರಾಷ್ಟ್ರಧ್ವಜವನ್ನು ಪ್ರತಿಯೊಬ್ಬರೂ
ಾರವಿಸಬೇಕೆಂಬುದಂತೂ ನಿಶ್ಚಯ. ಅದಕ್ಕಾಗಿ ನಮ್ಮ ಪ್ರಾಣಗಳನ್ನು
ಲಿಕೊಟ್ಟಾದರೂ ಹೋರಾಡೋಣ. ಆದರೆ ನಾವು ನಮ್ಮ ಇತಿಹಾಸ
ಾಗೂ ನಮ್ಮ ಅಸ್ತಿತ್ವಕ್ಕೆ ಕಾರಣರಾದ ಪೂರ್ವಜರನ್ನೇ ಮರೆತು ಒಂದು
ಾಲ್ಪನಿಕ ರಾಷ್ಟ್ರಧ್ವಜವನ್ನಿಟ್ಟುಕೊಂಡಿದ್ದೇವೆಂಬುದಂತೂ ಸತ್ಯ.

## ಾಯಕರ ತಿಳಿಗೇಡಿತನ

ಬ್ರಿಟಿಷರ ಕುಪ್ರಚಾರ ವ್ಯೆಗೂಡಿದ್ದ ನಾಯಕರಿಗೆ ತಾವು ದುರ್ಬಲ
ಂಬ ಭಾವನೆ ಬಲವಾಗಿತ್ತು. ಆದ್ದರಿಂದ ಸ್ವಾತಂತ್ರ್ಯಪ್ರಾಪ್ತಿಗಾಗಿ ಬ್ರಿಟಿಷರ
ರುದ್ಧ ಹೋರಾಡಲು ಸಹಾಯಕ್ಕಾಗಿ ಚೀನಾ, ಜಪಾನ್, ಜರ್ಮನಿ
ಮುಂತಾದ ಅನ್ಯದೇಶಗಳೆಡೆಗೆ ಕೈಚಾಚಿದರು. ತಮಗೆ ಪ್ರಯೋಜನವಿದ್ದಲ್ಲಿ
ಮಾತ್ರ ಪರದೇಶಗಳು ಸಹಾಯನೀಡುತ್ತವೆ. ಆದ್ದರಿಂದ ನಾಯಕರ ಯಾಚನೆ
ಲಿಸಲಿಲ್ಲ. ನಂತರ ಅವರು ಈ ದೇಶದ ಒಳಹೊಕ್ಕಿದ್ದಂಥ ಎಲ್ಲರನ್ನೂ
ಟ್ಟುಗೂಡಿಸಿ ಬ್ರಿಟಿಷರ ವಿರುದ್ಧ ಹೋರಾಡಲು ಯೋಚಿಸಿದರು.

## ಹಿಂದುಗಳ ಸತ್ಯಸ್ವರೂಪ

ಜ್ಯೂಗಳು ಮತ್ತು ಪಾರ್ಸಿಗಳು ಅತಿ ಸಣ್ಣ ಸಂಖ್ಯೆಯಲ್ಲಿದ್ದುದರಿಂದ
ಅವರ ಬಗ್ಗೆ ನಾಯಕರು ಗಮನಕೊಡಲಿಲ್ಲ. ಕ್ರಿಶ್ಚಿಯನರು ಮತ್ತು
ಮುಸಲ್ಮಾನರ ಕಡೆ ವಿಶೇಷ ಗಮನ ಹರಿಸಿದರು. ಕ್ರಿಶ್ಚಿಯನರು ಚಾಣಾಕ್ಷರು.
ಬ್ರಿಟಿಷರ ವಿರುದ್ಧ ಹೋರಾಟದಲ್ಲಿ ಸೇರುವುದನ್ನು ಉಪಾಯದಿಂದ ತಪ್ಪಿಸಿ
ಕೊಂಡರು. ಬ್ರಿಟಿಷರು ಅವರ ಧರ್ಮಬಂಧುಗಳಾಗಿದ್ದರು. ಕ್ರಿಶ್ಚಿಯನ್
ಮತಪ್ರಸಾರಕರು ಸ್ವಾತಂತ್ರ್ಯ ಹೋರಾಟಗಾರರನ್ನು ಹತ್ತಿಕ್ಕಲು ೧೮೫೭
ಂದಲೂ ಬ್ರಿಟಿಷರಿಗೆ ಸಹಾಯ ನೀಡಿದ್ದಾರೆ. ಇದು ನನ್ನ ಕಲ್ಪನೆಯಲ್ಲ,

ಚರಿತ್ರೆಯಲ್ಲಿ ಸ್ಪಷ್ಟವಾಗಿ ಅಂಕಿತವಾಗಿದೆ. ಈ ಭೂಮಿ ತಮ್ಮ ಮತಪ್ರಸಾ ಕ್ಕಾಗಿ ಹಾಗೂ ಪ್ರಭುತ್ವ ನಡೆಸುವ ಸಲುವಾಗಿ ಇದೆಯೆಂದೇ ಅವರ ಭಾವನ ಯಾಗಿತ್ತು. ಮತಾಂತರಕ್ಕೆ ಅನುಕೂಲವಾಗಲು ಅನೇಕ ಸ್ಥಾನಗಳಿ ಹಿಂದುಗಳು ಹೋಗದಂತೆ ಪ್ರತಿಬಂಧಕ ವಿಧಿಸಲಾಗಿತ್ತು. ರಾಂಚಿ ಜಿಲ್ಲೆಯ ಛೋಟಾ ನಾಗಪುರದ ಅನೇಕ ಘಟನೆಗಳು ನನಗೆ ಗೊತ್ತಿವೆ. ಒಮ್ಮೆ ಕೆಲವು ಆರ್ಯಸಮಾಜದ ಕಾರ್ಯಕರ್ತರು ನಮ್ಮ ಪುರಾತನ ಶ್ರೇಷ್ಠ ಸಂಸ್ಕೃತಿ ಯನ್ನು ಬೋಧಿಸಲು ಅಲ್ಲಿಗೆ ಹೋದರು. ಅವರಲ್ಲಿ ಕೆಲವರನ್ನು ದೇಶಾಂತರ ಕಳುಹಿಸಲಾಯಿತು. ಇನ್ನು ಕೆಲವರು ಇನ್ನೂ ಪತ್ತೆಯಿಲ್ಲ. ಮಹಾತ್ಮಾ ಏಸುವಿನ ಭಕ್ತರ ಕೈಯಲ್ಲಿ ಅವರು ಪೈಶಾಚಿಕ ರೀತಿಯಲ್ಲಿ ಕೊಲೆಯಾದರೆಂಬ ಸುದ್ದಿ ಬಲವಾಗಿ ಹರಡಿದೆ. ಗೋವಾ ಇತಿಹಾಸವನ್ನಂತೂ ಮರೆಯುವಂತೆ ಯೇ ಇಲ್ಲ. ಅತ್ಯಂತ ಪಾಶವೀ ರೀತಿಯಲ್ಲಿ (ಪಾಶವೀ ಎಂದು ಹೇಳಲೂ ನಾನು ಸಿದ್ಧನಿಲ್ಲ, ಅದರಿಂದ ಪಶುಗಳಿಗೇ ಅಪಮಾನವಾದೀತು. ಮೃಗಗಳೂ ಅಂಥ ಅತ್ಯಾಚಾರವನ್ನೆಸಗಲಾರವು) ಅತ್ಯಾಚಾರ ನಡೆಸಿದರು. ಅದನ್ನು ಮಾತುಗಳಿಂದ ವರ್ಣಿಸುವುದು ಅಸಾಧ್ಯ. ಅಂತೂ ಅವರನ್ನು ಸಭ್ಯರೆಂದು ನಮ್ಮ ನಾಯಕರು ಹೇಗೋ ನಂಬಿದರು. ಅಲ್ಲದೆ, ಪ್ರಜಾಪ್ರಭುತ್ವದಲ್ಲಿ ನಂಬಿಕೆಯಿರಿಸಿದ್ದ ನಾಯಕರು ಧರ್ಮವು ದೇಶಭಕ್ತಿಗೆ ಅಡ್ಡಿ ತರುವುದಿಲ್ಲವೆಂದು ಯೋಚಿಸಿ ಕ್ರಿಶ್ಚಿಯನರನ್ನು ಅಷ್ಟಕ್ಕೇ ಬಿಟ್ಟರು.

## ಹಿಂದುಗಳ ವಿಶ್ವಾಸದ ಹತ್ಯೆ

ಇನ್ನು ಉಳಿದುದು ಒಂದೇ ಒಂದು ಸಮಾಜ – ಮುಸ್ಲಿಮರದು. ಆದ್ದರಿಂದ ನಾಯಕರು ಹಿಂದು – ಮುಸ್ಲಿಂ ಐಕ್ಯತೆಗೆ ಕರೆಕೊಟ್ಟರು; ಘೋಷಣೆಗಳನ್ನು ಕೂಗಿದರು. ಹಿಂದು – ಮುಸ್ಲಿಂ ಐಕ್ಯತೆಯಿಲ್ಲದೆ ಸ್ವಾತಂತ್ರ್ಯ ಪಡೆಯುವುದು ಅಸಾಧ್ಯವೆಂದರು. ಹಿಂದು – ಮುಸ್ಲಿಂ ಒಂದಾಗದೆ ಸ್ವಾತಂತ್ರ್ಯ ಬಂದರೂ ಬೇಡವೆಂದು ನಾಯಕರು ಹೇಳಿದರು. ಹಿಂದುಗಳು ದುರ್ಬಲರೆಂದೂ, ಮುಸ್ಲಿಮರೊಡನೆ ಬೆರೆಯದೆ ಸ್ವಾತಂತ್ರ್ಯ ಪಡೆಯಲು ಅಸಮರ್ಥರೆಂದೂ ಹೇಳಲಾಯಿತು. ಹಿಂದುಗಳು ಮುಸ್ಲಿಮರ

ಯುರೆಹೊಕ್ಕು ಅವರ ರಕ್ಷಣೆ ಪಡೆಯಬೇಕೆಂದು ಈ ನಾಯಕರು ಬೋಧಿಸಿದರು. ಇದರಿಂದ ಹಿಂದುವಿನ ಆತ್ಮವಿಶ್ವಾಸ ಹಾರಿಹೋಯಿತು. ಅವನಲ್ಲಿ ಮನೋ ದೌರ್ಬಲ್ಯ ಹುಟ್ಟಿತು. ಆದರೆ ಧೂರ್ತ ರಾಜಕಾರಣಿಗಳಾದ ಮುಸ್ಲಿಮ ರಂತೂ ಹತ್ತಿರ ಬರಲಿಲ್ಲ. ಅವರು ಕಾಂಗ್ರೆಸ್ ಮತ್ತು ಬ್ರಿಟಿಷರು, ಇಬ್ಬರಿಂದಲೂ ಲಾಭಪಡೆದು ತಮ್ಮ ಅಧಿಕಾರ ಹೆಚ್ಚಿಸಿಕೊಳ್ಳತೊಡಗಿದರು. ಇಂತಿಷ್ಟು ಸೌಲಭ್ಯಕೊಡುತ್ತೇವೆಂದು ಅವರಿಗೆ ಬ್ರಿಟಿಷರು ಆಸೆ ತೋರಿಸಿದರು. ಕಾಂಗ್ರೆಸ್ಸಿನ ನಮ್ಮ ನಾಯಕರು ಇನ್ನೂ ಹೆಚ್ಚಿನ ಸ್ಥಾನಮಾನ ಕೊಡು ತ್ತೇವೆಂದು ಭಾಷೆಕೊಟ್ಟರು. ಸರಿ, ಬ್ರಿಟಿಷರು ಅದಕ್ಕೂ ಹೆಚ್ಚಿನ ಪದವಿ ಕೊಡುತ್ತೇವೆಂದರು; ಅವರಿಗೇನು, ತಮ್ಮ ಸ್ವಂತ ಮನೆಯಿಂದ ತಂದುಕೊಡ ಬೇಕಾಗಿರಲಿಲ್ಲ. ಆದ್ದರಿಂದ ಹೆಚ್ಚು ಹೆಚ್ಚು ಅಧಿಕಾರ ಕೊಡುತ್ತಲೇ ಇದ್ದರು. ಈ ಸ್ಪರ್ಧೆಯಲ್ಲಿ ಮುಸಲ್ಮಾನರು ಎರಡು ಕಡೆಯಲ್ಲೂ ಅಧಿಕಾಧಿಕ ಅಧಿಕಾರ ಪಡೆಯುತ್ತಲೇ ಇದ್ದರು. ಕೊನೆಗೆ ಅವರು ನಮ್ಮ ನಾಯಕರ ದುರ್ಬಲತೆಯನ್ನುಪಯೋಗಿಸಿಕೊಂಡು ಬ್ರಿಟಿಷರ ಸಹಾಯದಿಂದ ತಮ್ಮದೇ ರಾಜ್ಯವನ್ನೂ ಪಡೆದರು.

## ರಾಷ್ಟ್ರೀಯ ಮುಸ್ಲಿಮರ ಒಳಗುಟ್ಟು

ನಾವು ಯಾವ ವ್ಯಕ್ತಿಯನ್ನು ಮಹಾತ್ಮರ ಸಾಲಿನಲ್ಲಿರಿಸಿ, ಮಹಾತ್ಮರ ಹೆಸರಿನಿಂದ 'ಗಡಿನಾಡು ಗಾಂಧಿ' ಎಂದು ಕರೆದು ಗೌರವಿಸಿದೆವೋ, ಅಂಥವರೇ, "ಸ್ವಾತಂತ್ರ್ಯ ಬಂದನಂತರ ಪ್ರತ್ಯೇಕ ಫಖ್ತೂನಿಸ್ಥಾನ ಕೊಡುವ ಆಶ್ವಾಸನೆ ದೊರೆತುದರಿಂದ ನಾನು ಕಾಂಗ್ರೆಸಿನೊಡನೆ ಚಳುವಳಿಯಲ್ಲಿ ಸೇರಿದೆ" ಎಂದು ಹೇಳಿದ್ದಾರೆ. ಎಂದರೆ ಇದು ಮಾತೃಭೂಮಿಯೆಂಬ ಪ್ರೇಮದಿಂದಲ್ಲ, ಆದರೆ ಇದರಲ್ಲಿ ಒಂದು ಭಾಗ ಸಿಕ್ಕುತ್ತದೆಂಬ ಸ್ವಾರ್ಥದಿಂದ ಅವರು ಸಹಕರಿ ಸಿದ್ದರು ! ಹೀಗೆ ಪ್ರತಿಯೊಬ್ಬ ಮುಸ್ಲಿಂ ನಾಯಕನೂ ಏನಾದರೊಂದು ಸ್ವಾರ್ಥವನ್ನಿಟ್ಟುಕೊಂಡೇ ಚಳುವಳಿಯಲ್ಲಿ ಸೇರಿದ್ದನು. ಇಂಥ ಲೆಕ್ಕವಿಲ್ಲದಷ್ಟು ಉದಾಹರಣೆಗಳು ಸಿಗುತ್ತವೆ. ದಿವಂಗತ ಮೌಲಾನಾ ಆಜಾದರ ಪುಸ್ತಕವನ್ನು ಎಚ್ಚರಿಕೆಯಿಂದ ಸೂಕ್ಷ್ಮವಾಗಿ ಓದಿದರೆ ಅವರು ಜಿನ್ನಾರಂತೆ ಕೇವಲ ಒಂದು ಭಾಗವನ್ನು ಪಡೆಯುವಷ್ಟು ಅಲ್ಪತೃಪ್ತರಾಗಿರಲಿಲ್ಲವೆಂದೂ, ಇಡೀ

ಹಿಂದೂಸ್ಥಾನವನ್ನೇ ಪಾಕಿಸ್ತಾನವನ್ನಾಗಿ ಮಾರ್ಪಡಿಸುವ ಹಂಚಿಕೆ ಅವರಿಗೆ ಇತ್ತೆಂದೂ ಸ್ಪಷ್ಟವಾಗುತ್ತದೆ. ಇದು ನಾನು ಹೇಳುವ ಮಾತಲ್ಲ, ಸರ್ವ ಶ್ರೇಷ್ಠ ನ್ಯಾಯಾಲಯದ ಶ್ರೇಷ್ಠತಮ ನ್ಯಾಯಾಧೀಶರಾಗಿದ್ದ ಶ್ರೀ ಮೆಹರ ಚಂದ ಮಹಾಜನರೇ ಹಾಗೆ ಹೇಳಿದ್ದಾರೆ. ಅವರು ಓರ್ವ ಉನ್ನತ ಮಟ್ಟದ ನ್ಯಾಯಾಧೀಶರು. ನಮ್ಮ ಪ್ರಧಾನಮಂತ್ರಿಗಳು ನ್ಯಾಯಾಧೀಶರನ್ನು ಮೂರ್ಖರೆನ್ನುತ್ತಾರೆ. ಆದರೆ ನ್ಯಾಯಾಧೀಶರನ್ನೂ ಮೂರ್ಖರೆನ್ನುವಷ್ಟು ಬುದ್ಧಿವಂತಿಕೆ ಹಾಗೂ ಉದ್ಧಟತನ ನನಗಿಲ್ಲ.

## ಆಕ್ರಮಣದ ಹೊಸ ಅಧ್ಯಾಯ

ಇಂದು ಭಾವಾತ್ಮಕ ಏಕತೆ (Emotional Integration) ಆಗಬೇಕೆಂದು ನಾಯಕರೆನ್ನುತ್ತಾರೆ. ಆದರೆ ಅದಕ್ಕೆ ಒಂದು ಸಮಾನ ಭಾವನೆ (Common Emotion) ಬೇಡವೇ? ಆದಿದ್ದರೆ ಅದರ ಆಧಾರದ ಮೇಲೆ ಮಾತ್ರ ಏಕತೆ (Integration) ಉತ್ಪನ್ನವಾಗಬಲ್ಲದು. ಹಿಂದೂಗಳೊಡನೆ ಒಂದಾಗುವಂಥ ಯಾವುದೇ ಸಮಾನ ಗುಣವೂ ಮುಸ್ಲಿಮರಲ್ಲಿಲ್ಲ. ಒಂದಾಗಲು ಬೇಕಾದಂಥ ಮೂಲನಿಯಮ – ಈ ಮಾತೃಭೂಮಿಯ ಬಗ್ಗೆ ಪ್ರೇಮ – ಅದೇ ಅವರಲ್ಲಿಲ್ಲ. ಎಂದ ಮೇಲೆ ಮತ್ತೇನು ತಾನೆ ಇದ್ದೀತು? ಅವರು ಆಕ್ರಮಣಕಾರಿಗಳಾಗಿ ಬಂದರು, ಇಂದಿಗೂ ಆಕ್ರಮಣಕಾರಿಗಳಾಗಿಯೇ ಉಳಿದಿದ್ದಾರೆ. ಇದನ್ನು ನಾವು ಪವಿತ್ರ ಭೂಮಿ ಎನ್ನುತ್ತೇವೆ; ಅವರಿಗೂ ಹಾಗೆನಿಸುತ್ತದೆಯೇ? ವಿಭಜನೆಯಾದ ಕೂಡಲೇ ಅವರು ತಮ್ಮ ಭಾಗವನ್ನು ಪಾಕಿಸ್ತಾನ – ಪವಿತ್ರಭೂಮಿ (ಪಾಕ್ ಎಂದರೆ ಪವಿತ್ರ) – ಎಂದು ಕರೆದರು. ಉಳಿದ ಭೂಮಿ ಅವರಿಗೆ ಪಾಪಭೂಮಿ ಎಂದಾಯಿತು. ನಿಜವಾದ ಪುತ್ರರೆಂದಿಗೂ ತಾಯ್ನಾಡನ್ನು ಪಾಪಭೂಮಿ ಎಂದು ಭಾವಿಸಲಾರರು. ಹಿಂದುಗಳನ್ನು ನಾಶಮಾಡಿ ತಮ್ಮ ಪ್ರಭುತ್ವ ಸ್ಥಾಪಿಸಲು ಅವರಿಲ್ಲಿಗೆ ಬಂದರು. ಅದನ್ನು ಸಾಧಿಸಲು ೧೨೦೦ ವರ್ಷಗಳಿಂದ ನಡೆದ ಅವರ ಪ್ರಯತ್ನಕ್ಕೆ ಯಶಸ್ಸು ದೊರೆತಿರಲಿಲ್ಲ. ಬ್ರಿಟಿಷರ ಆಗಮನವಾಗುತ್ತಲೇ ತಮ್ಮ ಆಕ್ರಮಣದ ರೂಪ ಬದಲಿಸಿದರು ಮತ್ತು

ಅಷ್ಟು ವರ್ಷಗಳಿಂದ ದೊರೆಯದಿದ್ದ ಸಫಲತೆ ಅವರಿಗೆ ಪಾಕಿಸ್ತಾನದ ರೂಪದಲ್ಲಿ ಸಿಕ್ಕಿತು. ಇದು ಅವರ ಸಹಸ್ರ ವರ್ಷಗಳ ಆಕ್ರಮಣದ ಹೊಸ ಅಧ್ಯಾಯ ಮಾತ್ರವಾಗಿದೆ. ನಾವಿದನ್ನು ಜಾಗರೂಕತೆಯಿಂದ ಅರ್ಥಮಾಡಿಕೊಂಡು, ಇತಿಹಾಸದಿಂದ ಪಾಠ ಕಲಿತರೆ ಮುಂದಾಗುವ ಅನಾಹುತಗಳನ್ನಾದರೂ ತಪ್ಪಿಸಬಹುದು.

## ಕುಲಕ್ಕೆ ಮೃತ್ಯು-ಕೊಡಲಿಯ ಕಾವು

ನಮಗೆ ಪವಿತ್ರವಾದುದನ್ನೆಲ್ಲ ಅಪವಿತ್ರಗೊಳಿಸುವುದು, ಇಲ್ಲ ನಾಶಗೊಳಿಸುವುದೇ ಮುಸ್ಲಿಮರ ರಕ್ತಗತ ಗುಣವಾಗಿದೆ. ನಾವು ಗೋವನ್ನು ಪೂಜಿಸುತ್ತೇವೆ, ಅವರಿಗೆ ಅದರ ಮಾಂಸವೇ ಪ್ರಿಯ. ನಾವು ಪೂಜಿಸುವ ರಾಮ, ಕೃಷ್ಣ, ಶಿವಾಜಿ ಇತ್ಯಾದಿ ವೀರರೆಲ್ಲ ಅವರ ಶತ್ರುಗಳು. ಹೀಗೆ ಅವರು ನಮ್ಮ ಬಗ್ಗೆ ಬದ್ಧವೈರ ಸಾಧಿಸುತ್ತಿದ್ದರೂ ಸಹ, ನಮ್ಮ ನಾಯಕರು ತಮ್ಮ ದುರ್ಬಲ ನೀತಿಯಿಂದ ಹಿಂದೂಸಮಾಜವನ್ನು ಅವರಿಗೆ ಬಲಿಕೊಡುವ ಪ್ರಯತ್ನ ಮಾಡಿದರು. "ಮುಹಮ್ಮದ್ ಬೆಟ್ಟಕ್ಕೆ ಹೋಗಬೇಕು, ಇಲ್ಲವಾದರೆ ಬೆಟ್ಟವೇ ಮುಹಮ್ಮದನ ಬಳಿಗೆ ಹೋಗಬೇಕು" ಎಂಬ ಗಾದೆಯಿದೆ. ಮುಸಲ್ಮಾನ್ ಹಿಂದೂಪರ್ವತದ ಬಳಿ ಬರದಿದ್ದರೆ, ಹಿಂದೂಪರ್ವತವೇ ಅವನ ಬಳಿ ಹೋಗಬೇಕೆಂದರು ನಮ್ಮ ನಾಯಕರು. ಮುಸ್ಲಿಮರು ಕೋಪಗೊಳ್ಳದ ರೀತಿಯಲ್ಲಿ ಅವರನ್ನು ತೃಪ್ತಿಗೊಳಿಸುವಂತೆ ನಮಗೆ ಹೇಳಿದರು. 'ಹಿಂದು' ಹೆಸರನ್ನು ಹಾಗೂ ಪವಿತ್ರ ಇತಿಹಾಸ, ಪರಂಪರೆಗಳನ್ನು ಮರೆಯುವಂತೆ ಹೇಳಿದರು. ರಾಷ್ಟ್ರೀಯ ವೀರರನ್ನೆಲ್ಲ ಮರೆಯಬೇಕೆಂದೂ, ದೇಶಭಕ್ತರೆಂದು ಕರೆಯುವುದಾದರೆ ದಾರಿತಪ್ಪಿದ ದೇಶಭಕ್ತರು (Misguided Patriots) ಎಂದು ಕರೆಯಬೇಕೆಂದೂ ಉಪದೇಶಿಸಿದರು. ಮುಸಲ್ಮಾನರು ದೇವಸ್ಥಾನಗಳನ್ನುರುಳಿಸಿದರೆ ಉರುಳಿಸಲಿ; ಅವರು ಗೋವುಗಳನ್ನು ಕೊಲ್ಲುತ್ತಾರಾದರೆ, ಅದು ಅವರ ಧಾರ್ಮಿಕ ಹಕ್ಕು; (ಮುಸಲ್ಮಾನರ ಧಾರ್ಮಿಕ ವಿಧಿಯಲ್ಲಿ ಹಾಗಿಲ್ಲದಿದ್ದರೂ, ಸ್ವಾತಂತ್ರ್ಯ ಬಂದನಂತರ ಗೋಹತ್ಯೆಯ ಹಕ್ಕನ್ನು ಅವರಿಗೆ ರಕ್ಷಿಸಿಕೊಡುವುದಾಗಿ ೨೪ ವರ್ಷಗಳ ಹಿಂದೆ

ಅವರಿಗೆ ಪಂ. ನೆಹರೂ ಮಾತುಕೊಟ್ಟಿದ್ದರು) ಹೀಗೆಲ್ಲ ನಮ್ಮ ನಾಯಕರ ಹೇಳಿದರು. ನಮ್ಮ ತಂಗಿ, ತಾಯಿಯರ ಅಪಹರಣವಾದಾಗ – ಅವರು ಇಷ್ಟ ಪಡುತ್ತಾರೆ, ತೆಗೆದುಕೊಂಡು ಹೋಗಲಿ; ಅದು ಹುಡುಗ–ಹುಡುಗಿಯರ ಸಮಾಚಾರ, ಅಷ್ಟೆ – ಎಂದರು. ಇಷ್ಟೊಂದು ವಿಧದಲ್ಲಿ ನಮ್ಮನ್ನು ನಾವೇ ಮರೆಯುವಂತೆ ಹೇಳಿದರು. ನಮಗೆ ನಮ್ಮವರೇ ಕೊಟ್ಟ ಬೋಧನೆ ಇದು !

## ಪ್ರಧಾನಿಗಳ ಆತ್ಮವಂಚನೆ

ಇಂದು ಸಹ ಮುಸ್ಲಿಂ ಲೀಗ್ ಪುನರ್‌ಸ್ಥಾಪನೆಯಾಗಿ ಎಲ್ಲ ಕಡೆಗಳಲ್ಲಿಯೂ ತಲೆಯೆತ್ತುತ್ತಿದೆ. ಮುಂಬೈ ಮತ್ತು ಇನ್ನಿತರ ಕಡೆಗಳಲ್ಲಾದ ಅದರ ನಾಯಕರ ಭಾಷಣಗಳನ್ನೋದಿದರೆ, ಅವರು ತಮ್ಮ ಸ್ವತಂತ್ರ ಅಸ್ತಿತ್ವಕ್ಕಾಗಿ, ಸ್ವತಂತ್ರ ಹಿತಸಂಬಂಧಗಳ ಸಂತುಷ್ಟಿಗೆ ಈ ಭೂಮಿಯ ಮೇಲೆ ಪುನಃ ಸ್ವತಂತ್ರ ಸ್ವಾಮಿತ್ವವನ್ನು ಗಳಿಸುವುದಕ್ಕಾಗಿ ಎಲ್ಲ ಪ್ರಯತ್ನಗಳನ್ನೂ ನಡೆಸುತ್ತಿದ್ದಾರೆಂದು ಸ್ಪಷ್ಟವಾಗುತ್ತದೆ. ಪಾಕಿಸ್ತಾನದ ನಿರ್ಮಾಣವಾದಾಗ ಉತ್ತರ ಹಿಂದೂಸ್ಥಾನದ ಜನರಿಗೆ ಮುಸ್ಲಿಂ ಲೀಗಿನ ದೇಶದ್ರೋಹ ತಿಳಿಯಿತು. ಆದ್ದರಿಂದ ಕೂಡಲೇ ಅವರು ತಮ್ಮ ಕೇಂದ್ರವನ್ನು ಉತ್ತರದಿಂದ ದಕ್ಷಿಣಕ್ಕೆ ಬದಲಿಸಿದರು. ಕಳೆದ ೧೨ ವರ್ಷಗಳಿಂದ ತಾವು ಗುಪ್ತರೂಪದಲ್ಲಿ ಕೆಲಸ ನಡೆಸುತ್ತಿದ್ದುದಾಗಿ ಅದರ ಮುಖಂಡರೇ ಹೇಳಿದ್ದಾರೆ. ಈಗ ಕೇರಳ ಚಳವಳಿ ನಡೆದಾಗ ಅವರಿಗೊಂದು ಅವಕಾಶ ಸಿಕ್ಕಿತು; ಪುನಃ ಪ್ರತ್ಯಕ್ಷರಾಗಿದ್ದಾರೆ. ವಿಭಜನೆಯಾದಂದಿನಿಂದ ಅಲ್ಲಿ, ಇಲ್ಲಿ ಗಲಭೆ, ಗೋಹತ್ಯೆ ಇತ್ಯಾದಿಗಳನ್ನು ನಡೆಸಿ ತಮ್ಮ ಅಸ್ತಿತ್ವದ ಪರಿಚಯ ಮಾಡಿಕೊಡುತ್ತಿದ್ದರು. ಈಗಲಾದರೋ ಚೀನಾದಿಂದ ಭಾರತಕ್ಕೊದಗಿರುವ ಸಂಕಟ ಸಮಯವನ್ನು ದುರುಪಯೋಗಪಡಿಸಿಕೊಳ್ಳಲು ಭಾರತಾದ್ಯಂತ ಪ್ರಕಟರೂಪದಲ್ಲಿ ಕಾರ್ಯ ನಡೆಸಲು ಆರಂಭಿಸಿದ್ದಾರೆ. ನಿದ್ರಾಸ್ಥಿತಿಯಲ್ಲಿರುವ ನಾವು ಅವರನ್ನು 'ಭಾಯಿ–ಭಾಯಿ' ಎಂದು ಕರೆದು ಪುನಃ ಎತ್ತಿ ನಿಲ್ಲಿಸುತ್ತಿದ್ದೇವೆ. ದೇಶವನ್ನು ಕಡಿದು ಒಂದು ಶತ್ರುರಾಜ್ಯವನ್ನೇ ನಿರ್ಮಿಸಿದ ಪಕ್ಷವನ್ನು ರಾಷ್ಟ್ರೀಯ ಪಕ್ಷ ಎಂದು ಸನ್ಮಾನಿಸಿ ಕಾಂಗ್ರೆಸ್ ಪ್ರೋತ್ಸಾಹಿಸುತ್ತಿದೆ. ಪ್ರಧಾನಿಗಳು ಸಹ

"ಈಗಲಾದರೋ ಮುಸ್ಲಿಂ ಲೀಗ್ ಮೊದಲಿನಂತಿಲ್ಲ" ಎಂದು ಅದಕ್ಕೆ ಬೆಂಬಲ ನೀಡಿದ್ದಾರೆ. ಇದು ಘೋರ ಆತ್ಮವಂಚನೆಯಾಗಿದೆ. ಪ್ರಧಾನಿಯೇ ಆತ್ಮವಂಚನೆ ಮಾಡಿಕೊಂಡರೆ, ಅದು ದೇಶದ ಸರ್ವನಾಶಕ್ಕೆ ದಾರಿ. ಅಂಥ ರಾಷ್ಟ್ರದ ಭವಿಷ್ಯ ಹೇಗೆತಾನೆ ಉಜ್ವಲವಾದೀತು? ನಮ್ಮ ಈ ಮಹಾನಾಯಕರೇ ಶತ್ರುಗಳನ್ನು ಪೋಷಿಸುತ್ತಿದ್ದಾರೆ.

## ವಿಪತ್ತಿನ ಪರಂಪರೆ

ಭಾರತದ ಜೀವನದೊಡನೆ ಒಂದಾಗಲು ಮುಸ್ಲಿಮರು ಸಿದ್ಧರಿಲ್ಲ. ನಮ್ಮ ದೇಶದ ಮೇಲೆ ದಿನನಿತ್ಯ ನಡೆಯುತ್ತಿರುವ ಧಾಳಿಯನ್ನು ಭಾರತದಲ್ಲಿ ಇರುವ ಒಬ್ಬ ಮುಸಲ್ಮಾನನೂ ಖಂಡಿಸಿಲ್ಲ; ಖಂಡಿಸಲು ಅವರಿಗೆ ಇಷ್ಟವಿಲ್ಲ. ಕಾಶ್ಮೀರದ ಮೇಲೆ ಆಕ್ರಮಣ ನಡೆದರೆ, ಪಾಕಿಸ್ತಾನಕ್ಕೆ ಸಹಾಯಮಾಡಲು ಗಡಿಪ್ರದೇಶಗಳಲ್ಲಿನ ಮುಸ್ಲಿಮರು ನಿಶ್ಚಯಿಸಿದ್ದಾರೆಂದು ಇತ್ತೀಚೆಗೆ ಆ ಭಾಗದಲ್ಲಿ ಪ್ರವಾಸಮಾಡಿಬಂದ ಓರ್ವ ಗಣ್ಯವ್ಯಕ್ತಿ ತಿಳಿಸಿದ್ದಾರೆ. ಇನ್ನೊಂದೆಡೆ ನಾಗಾಸ್ಥಾನದ ರೂಪದಲ್ಲಿ ಹಾಗೂ ಕೇರಳದಲ್ಲಿ ಈಸಾಯೀಸ್ಥಾನ ನಿರ್ಮಿಸಲು ಕ್ರಿಶ್ಚಿಯನ್ನರು ಪ್ರಯತ್ನಿಸುತ್ತಲೇ ಇದ್ದಾರೆ. ಇತ್ತೀಚೆಗೆ ಕೇರಳದಲ್ಲಿ ಕಮ್ಯೂನಿಸ್ಟರ ವಿರುದ್ಧ ನಡೆದ ಆಂದೋಲನದ ಸಮಯದಲ್ಲಿ ಕ್ರಿಶ್ಚಿಯನ್ ನಾಯಕರು ತಮ್ಮ ಈ ಆಕಾಂಕ್ಷೆಯನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದ್ದಾರೆ. ಅಸ್ಸಾಂ, ಉರಿಯಾ, ಝಾರಖಂಡ ಇತ್ಯಾದಿ ಕಡೆಗಳಲ್ಲೂ ಈಸಾಯಿಗಳು ಪ್ರತ್ಯೇಕ ರಾಜ್ಯ ಕೇಳುವ ಹವಣಿಕೆಯಲ್ಲಿದ್ದಾರೆ.

## ಜಯಚಂದ್ರನ ಪೀಳಿಗೆ

ಮುಸ್ಲಿಮರು ಮತ್ತು ಕ್ರಿಶ್ಚಿಯನರ ಜೊತೆಗೆ ನಮ್ಮ ಸಮಾಜದಲ್ಲೇ ಅನೇಕ ಶತ್ರುಗಳಿದ್ದಾರೆ. ಚೀನಾ ಆಕ್ರಮಣವನ್ನು ಸ್ವಾಗತಿಸಲು ನಮ್ಮ ದೇಶದಲ್ಲಿಂದು ಒಂದು ದೊಡ್ಡ ಪಕ್ಷವೇ ಸಿದ್ಧವಾಗಿ ನಿಂತಿದೆ. ಅವರು ನಮ್ಮ ಜನರೇ ಹೌದು. ತಮ್ಮ ನೀತಿ ಪರಿವರ್ತನೆಯ ಬಗ್ಗೆ ಒಂದು ದೊಡ್ಡ ಶಬ್ದ ಜಾಲವನ್ನೇ ಹರಡಿದ್ದಾರೆ. ನಾವು ಅವರನ್ನು ಸರಿಯಾಗಿ ಅರ್ಥಮಾಡಿಕೊಳ್ಳ

ಬೇಕು. ಹಿಂದೆ ದೊಡ್ಡದೊಡ್ಡ ರಾಜರೂ ಸಹ ಆಕ್ರಮಣಕಾರರನ್ನು ಆಹ್ವಾನಿಸಿದ್ದರು. ಕೇರಳದಲ್ಲಿ ಮಂತ್ರಿಗಳಾಗಿ ರಾಜ್ಯ ನಡೆಸಿದ ಈ ಜನರು ಸಹ ಇಂದು ಆದೇ ರೀತಿ ಮಾಡುತ್ತಿದ್ದಾರೆ. ಅಧಿಕ ಸಂಖ್ಯೆಯಲ್ಲಿ ವಿದ್ಯಾವಂತರಿರುವ ಕಲ್ಕತ್ತಾದಂತಹ ವಿಶಾಲ ನಗರದಲ್ಲಿ ಇತ್ತೀಚೆಗೆ ಚೀನಾ ಆಕ್ರಮಣವನ್ನು ಸ್ವಾಗತಿಸುವ ಘೋಷಣೆಗಳನ್ನು ಕೂಗುತ್ತಾ ಇದೇ ಜನರು ಮೆರವಣಿಗೆ ನಡೆಸಿದರು. ವಿಧಾನಸಭೆಯಲ್ಲೂ ಅವರು ಚೀನಾವನ್ನೇ ಸಮರ್ಥಿಸಿ ಮಾತನಾಡುತ್ತಾರೆ. ಶತ್ರುಗಳಾದ ಪರಕೀಯರನ್ನು ಸ್ವಕೀಯರೆಂದು ತಿಳಿಯುವ ಮತ್ತು ಅವರನ್ನು ಸ್ವಾಗತಿಸುವ ರಾಷ್ಟ್ರಭಾವದ ಅತೀವ ಅಭಾವ-ರಾಷ್ಟ್ರದ್ರೋಹದ ಭಾವನೆ—ಎಷ್ಟೊಂದು ಬೆಳೆದಿದೆ? ಇದೆಂಥ ದೌರ್ಭಾಗ್ಯ! ಕಮ್ಯುನಿಸ್ಟ್ ನಾಯಕರು 'ಪರಕೀಯರ ಆಕ್ರಮಣವನ್ನು ಸಹಿಸುವುದಿಲ್ಲ' ಇತ್ಯಾದಿ ಹೇಳಿದ್ದಾರೆ. ಆದರೆ ಅವರಿಗೆ ಪರಕೀಯರು ಚೀನಾದವರಲ್ಲ; ನಾನು, ನೀವು ಮತ್ತು ನಮ್ಮ ಪ್ರಧಾನಿಗಳು! ಇದು ಆಶ್ಚರ್ಯದ ಮಾತಲ್ಲ. ಏಕೆಂದರೆ ಮದುವೆಯಾದ ಹೆಣ್ಣುಮಕ್ಕಳಿಗೆ ಗಂಡನ ಮನೆಯೇ ಸ್ವಕೀಯವಾಗುತ್ತದೆ, ತಂದೆ ತಾಯಿಗಳು ಪರಕೀಯರಾಗುತ್ತಾರೆ. ರಷ್ಯಾ-ಚೀನಾ ಸಂಸಾರಕ್ಕೆ ಸೇರಿದವರಾದುದರಿಂದಲೇ ಅವರು ಟಿಬೆಟಿನ ಆಕ್ರಮಣವನ್ನು 'ವಿಮೋಚನೆ' ಎಂದು ಕರೆದರು, ಚೀನಾ ಸೇನೆಯನ್ನು 'ಮುಕ್ತಿಸೇನೆ' ಎಂದು ಹೊಗಳಿದರು.

## ಸಹಸ್ರ ವರ್ಷಗಳ ದೋಷ ಜೀವಂತವಿದೆ

ಆಸೇತುಹಿಮಾಚಲ ಹಬ್ಬಿರುವ ನಮ್ಮೀ ವಿಶಾಲ ಮಾತೃಭೂಮಿಯ ಬಗ್ಗೆ ನಮಗೆ ಆತ್ಮೀಯತೆ ಅಳಿದುದರಿಂದಲೇ ಪರಕೀಯರು ಬಂದು ರಾಜ್ಯ ಕಟ್ಟಲವಕಾಶವಾಯಿತು. ಇಂದೂ ಸಹ ಆದೇ ಪರಿಸ್ಥಿತಿಯಿದೆ; ಆ ಸಹಸ್ರ ವರ್ಷಗಳ ಹಿಂದಿನ ದೋಷವಿನ್ನೂ ಸತ್ತಿಲ್ಲ, ಜೀವಂತವಿದೆ; ಅಂದಿಗಿಂತಲೂ ಅಧಿಕವಾಗಿಯೇ ಇದೆ. ಮಾತೃಭೂಮಿಯ ಮೈಮೇಲಾಗುತ್ತಿರುವ ಶತ್ರುಗಳ ಆಕ್ರಮಣಕ್ಕಾಗಿ ಯಾರಿಗೂ ದುಃಖವಿಲ್ಲ; ವಿಭಜನೆಯಾಗಿರುವುದಕ್ಕಾಗಿ ದುಃಖವಿಲ್ಲ; ದೇಶದಲ್ಲಿರುವ ಅಸಂಖ್ಯಾತ ಅಂತಃಕಲಹ, ಅನೈಕ್ಯತೆಗಳ

ಪರಿಸ್ಥಿತಿ ಕಂಡು ಸಂಕಟವಾಗುವುದಿಲ್ಲ. ಚೀನೀಯರು ಬಂದರು, ಕೆಲವು ಜನರನ್ನು ಕೊಂದರು; ಹೆಣಗಳನ್ನು ಹಿಂದಕ್ಕೆ ಕೊಟ್ಟರು; ಅಷ್ಟೆತಾನೇ? ಎಂದು ಜನರು ಸಡಿಲವಾಗಿ, ಸುಲಭವಾಗಿ ಮಾತನಾಡಿ ಮುಗಿಸುತ್ತಾರೆ. ಇದೆಂಥ ದೌರ್ಭಾಗ್ಯದ ಸಂಗತಿ! ಏಕಾತ್ಮತೆಯ ಘೋರ ವಿಸ್ಮೃತಿ ಹಾಗೂ ರಾಷ್ಟ್ರೀಯ ಜೀವನದ ವಿಪರೀತ ವಿಕೃತಿಯಾಗಿದೆ ಇದು.

## ಇನ್ನೂ ಸ್ವಾತಂತ್ರ್ಯ ಬಂದಿಲ್ಲ

ಈ ವಿಕೃತಿ, ವಿಸ್ಮೃತಿಗಳೆಲ್ಲವನ್ನೂ ದೂರಗೊಳಿಸಲು ಹಿಂದೂ ರಾಷ್ಟ್ರದ ರಾಷ್ಟ್ರೀಯ ಏಕಾತ್ಮತೆಯ ಮೂಲಭೂತ ಸಂಸ್ಕಾರಗಳನ್ನು ಒಪ್ಪಿಕೊಳ್ಳಲೇ ಬೇಕು. ನಮ್ಮೆಲ್ಲ ಶಕ್ತಿಯನ್ನೂ ವಿನಿಯೋಗಿಸಿ, ನಿಶಿದಿನದ ಪರಿಶ್ರಮದಿಂದ ರಾಷ್ಟ್ರದ ಬಗ್ಗೆ ಭಕ್ತಿ ಹಾಗೂ ಸದ್ಭಾವನೆಯನ್ನು ವ್ಯಕ್ತಿ-ವ್ಯಕ್ತಿಯ ಹೃದಯ ದಲ್ಲಿ ಪ್ರಸ್ಥಾಪಿಸಿ, ಸಂಪೂರ್ಣ ಸಮಾಜದ ಏಕಾತ್ಮ ಜೀವನದ ಅನುಭೂತಿ ಎಲ್ಲರ ಅಂತಃಕರಣದಲ್ಲಾಗುವಂತೆ ಪ್ರಯತ್ನಿಸಬೇಕು. ಈ ಭೂಮಿಯಲ್ಲಿ ಅನಾದಿಕಾಲದಿಂದ ನಡೆದುಬಂದಿರುವ ಹಿಂದೂ ಸಮಾಜದ ರಾಷ್ಟ್ರಜೀವನವು ಸಂಪೂರ್ಣ ಸ್ವಾಮಿತ್ವ, ಪ್ರಭುತ್ವ, ಐಶ್ವರ್ಯ, ವೈಭವಗಳೊಡನೆ ಪುನಃ ನೆಲೆಗೊಳ್ಳುವವರೆಗೂ ಭಾರತವು ಸ್ವತಂತ್ರವಾಯಿತೆಂದು ಹೇಳಲು ಸಾಧ್ಯವಿಲ್ಲ. ನಮ್ಮ ಸಮಾಜವನ್ನು ಏಕಸೂತ್ರದಲ್ಲಿ ಹೆಣೆದು, ಅನುಶಾಸಿತ ವ್ಯವಹಾರದ ಶಿಕ್ಷಣವಿತ್ತು, ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಸುಸಂಘಟಿತ ಸಾಮರ್ಥ್ಯದ ರೂಪದಲ್ಲಿ ಎದ್ದು ನಿಲ್ಲಿಸುವುದು ಅತ್ಯಂತ ಅಗತ್ಯ. ಆಗಲೇ ನಾವು ಒಳಹೊರಗಿನ ಎಲ್ಲಾ ಶತ್ರುಗಳನ್ನೂ ನಿವಾರಿಸಿ ಸುರಕ್ಷಿತ, ಸುವ್ಯವಸ್ಥಿತ ಹಾಗೂ ಸನ್ಮಾನಿತ ಜೀವನವನ್ನು ನಡೆಸಲು ಸಮರ್ಥರಾಗಬಲ್ಲೆವು.

## ವಿರಾಟಪುರುಷ ಮೇಲೇಳಲಿ

ಈ ಭೂಮಿ ನಮ್ಮ ಮಾತೆ. ಭಾರತವರ್ಷದ ಸ್ಥೂಲರೂಪ ಧರಿಸಿರುವ ಸಾಕ್ಷಾತ್ ಜಗಜ್ಜನನಿ ಈಕೆ. ಈಕೆಯ ಪುತ್ರರು ನಾವು. ಉಳಿದೆಲ್ಲರೂ ಆಶ್ರಯಾರ್ಥಿಗಳು ಅಥವಾ ಆಕ್ರಮಣಕಾರಿಗಳಾಗಿ ಬಂದವರು. ಅವರೆಂದೂ

ನಮ್ಮ ಜೀವನದೊಂದಿಗೆ ಸಮರಸರಾಗಲಿಲ್ಲ. ಇಲ್ಲಿ ನಾವೊಂದು ಪ್ರಬಲ ರಾಷ್ಟ್ರಜೀವನ ನಿರ್ಮಿಸಿದ್ದೆವು. ಆದರೆ ಈಗದು ಜನಮನದಿಂದ ಮರೆತು ಹೋಗಿದೆ. ಹಿಂದುಗಳೇ ಈ ಭೂಮಿಯ ಸಂತಾನರೆಂಬ ಸತ್ಯಸಂಗತಿಯನ್ನು ಎಲ್ಲರ ಹೃದಯಕ್ಕೆ ಮುಟ್ಟಿಸಬೇಕು; ತಾಯ್ನೆಲದ ಮೇಲಿನ ಮಮತೆಯನ್ನು ನಾವು ಪುನರ್‌ಜಾಗೃತಗೊಳಿಸಬೇಕು. ಈ ಆದರ್ಶದ ಆಧಾರದ ಮೇಲೆ ಕಾಶ್ಮೀರದಿಂದ ಹಿಡಿದು ಕನ್ಯಾಕುಮಾರಿಯುವರೆಗೆ ಪುನಃ ನಾವು ಸಬಲ ರಾಷ್ಟ್ರವೊಂದನ್ನು ಕಟ್ಟಲಿದ್ದೇವೆ. ಅಸಂಖ್ಯ ಭಾಷೆಗಳು, ಜಾತಿಮತಗಳು ಮತ್ತು ಅಂತಹದೇ ಅನೇಕ ಬಾಹ್ಯ ಭಿನ್ನತೆಗಳು ಎಷ್ಟಿದ್ದರೂ ಏನಂತೆ, ಹಿಂದೂ ಜನರು ಒಂದೇ ಅವಿಭಕ್ತ ಕುಟುಂಬವಾಗಿದ್ದಾರೆ. ನಮ್ಮ ಧಮನಿಗಳಲ್ಲಿ ಒಂದೇ ರಕ್ತ ಪ್ರವಹಿಸುತ್ತಿದೆ; ನಮ್ಮ ನಾಡಿಗಳಲ್ಲಿ ಒಂದೇ ಸ್ವರ ಮಿಡಿಯುತ್ತಿದೆ; ಒಂದೇ ಶಾಶ್ವತ ಸತ್ಯ ನಮ್ಮೆಲ್ಲರ ಹೃದಯಗಳನ್ನೂ ಬೆಳಗುತ್ತಿದೆ. ಎಲ್ಲರೂ ಒಂದೇ ವ್ಯಕ್ತಿಯಂತೆ—ಒಂದೇ ಆದರ್ಶದ, ಧರ್ಮದ ಸಹಭಾಗಿಗಳಾಗಿ; ಒಂದೇ ಪರಂಪರೆಯ ಅನುಯಾಯಿಗಳಾಗಿ; ಸಮಾನಹಿತ-ಆಸಕ್ತಿಗಳ, ಸಮಾನ ಸುಖ-ದುಃಖಗಳ ಅನುಭೂತಿಯಲ್ಲಿ ಹಾಗೂ ಸಮಾನ ಆಸೆ-ಆಕಾಂಕ್ಷೆ, ಸಮಾನ ಸಂಕಟ-ಸಂಘರ್ಷಗಳಲ್ಲಿ ಒಂದಾಗಿ; ಸಹಸ್ರಾರು ವರ್ಷಗಳ ಚಿರಪುರಾತನ ಜೀವನ ನಡೆಸಿರುವ—ಮಹಾನ್ ವಿರಾಟ ಪುರುಷನಂತೆ ನಾವಿದ್ದೇವೆ. ನಮ್ಮೆಲ್ಲರ ಜೀವನವೂ ಒಂದೇ ಆತ್ಮದೊಂದಿಗೆ ಬೆಸೆಯಲ್ಪಟ್ಟು, ನಾವೊಂದು ಸಮಗ್ರ ಸಚೇತನ ಸ್ವರೂಪರಾಗಿದ್ದೇವೆ. ಪ್ರತಿಯೊಬ್ಬ ಹಿಂದೂವಿಗೂ ಸ್ವಾಭಿಮಾನದಿಂದ ಜೀವಿಸಬೇಕೆಂಬ ಅರಿವಾಗಲಿ. ಈ ಭವ್ಯ ಸಾಕ್ಷಾತ್ಕಾರವನ್ನು ನಾವು ಸಾಧಿಸಿದ್ದಾದರೆ ದೇಶದ ಒಳಗಿನ ಹಾಗೂ ಹೊರಗಿನ ಎಲ್ಲ ವಿಪತ್ತುಗಳನ್ನೂ ಜೀರ್ಣಗೊಳಿಸಬಲ್ಲೆವು.

## ಜನತೆಯ ಸಕ್ರಿಯ ಸಹಕಾರಕ್ಕೆ ಕರೆ

ಈ ಮಹಾರ್ಕಾರ್ಯಕ್ಕಾಗಿ ಸಂಘ ಹೊರಟಿದೆ. ಪ್ರೇಮದಿಂದ ಪ್ರೇರಿತರಾಗಿ ನಾವೆಲ್ಲರೂ ಈ ಕಾರ್ಯವನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ನಡೆಸೋಣ. ನಮ್ಮ ಉದ್ಯೋಗ-ದಂಧೆಗಳೇನೇ ಇರಲಿ, ರಾಜನೈತಿಕ

ವಿಚಾರಗಳೇನೇ ಇರಲಿ; ಅವೇ ಜೀವನದ ಸರ್ವಸ್ವವಲ್ಲ. ರಾಜನೈತಿಕ ವಿಚಾರಗಳು ರಾಷ್ಟ್ರದ ಮುಂದೆ ಒಂದು ಸಣ್ಣ, ಕ್ಷುದ್ರ ಸಂಗತಿಯಾಗಿವೆ. ಆ ಅಲ್ಪತೆಯಿಂದ ಪ್ರತಿಯೊಬ್ಬರೂ ಮೇಲೆದ್ದು —ಈ ಸಮಾಜ ನನ್ನದು ; ಸಂಘದ ಈ ಕಾರ್ಯ ನನ್ನದು ; ನಾನಿದನ್ನು ಮಾಡುತ್ತೇನೆ, ಭುಜಕ್ಕೆ ಭುಜ ಕೊಟ್ಟು ಮಾಡುತ್ತೇನೆ—ಎಂಬ ನಿಶ್ಚಯ ಮಾಡೋಣ. ನಗರವಾಸಿಗಳಿಂದ ಹಿಡಿದು ದುರ್ಗಮ ಅರಣ್ಯಗಳಲ್ಲಡಗಿರುವ ವನವಾಸಿಗಳವರೆಗೆ ಪ್ರತಿಯೊಬ್ಬ ಹಿಂದುವಿನ ಹೃದಯದಲ್ಲೂ ಮಾತೃಭೂಮಿಯ ಭಕ್ತಿಯನ್ನು ಜಾಗೃತಗೊಳಿಸೋಣ. ವಿಶುದ್ಧ ರಾಷ್ಟ್ರೀಯತೆಯ, ಏಕಾತ್ಮತೆಯ ಹಾಗೂ ಸಮಾಜದ ಬಗ್ಗೆ ಶ್ರದ್ಧಾ ಪ್ರೇಮಗಳ ದೈವೀ ಸಂದೇಶವನ್ನು ಮುಟ್ಟಿಸೋಣ. ಸಮಾಜದಲ್ಲಿ ಸಾಮರ್ಥ್ಯವನ್ನು ತುಂಬಿ, ರಾಷ್ಟ್ರಜೀವನವನ್ನು ವೈಭವಪೂರ್ಣಗೊಳಿಸುವ ಈ ಕರ್ತವ್ಯದಲ್ಲಿ ಎಲ್ಲ ಬಂಧುಗಳೂ ಸಹಭಾಗಿಗಳಾಗಬೇಕೆಂಬುದೇ ನನ್ನ ಪ್ರಾರ್ಥನೆ.

---

# ಸ್ವಯಂಸೇವಕರಿಗೆ

ನಾವೆಲ್ಲರೂ ಸಂಘದ ಸ್ವಯಂಸೇವಕರು. ಆ ಸಂಬಂಧದಿಂದಲೇ ನಾವಿಲ್ಲಿ ಒಟ್ಟಾಗಿ ಸೇರಿದ್ದೇವೆ. ನಮಗೆ ಸಂಘಕಾರ್ಯವನ್ನು ಉತ್ತಮರೀತಿಯಲ್ಲಿ ಮಾಡುವ ಸಾಮರ್ಥ್ಯ ಬರಬೇಕು; ಇಲ್ಲಿಂದ ನಮ್ಮ ನಮ್ಮ ಸ್ಥಾನಗಳಿಗೆ ತೆರಳಿದ ನಂತರ ನಮ್ಮ ಮೂಲಕ ಸಂಘಕಾರ್ಯ ಅಧಿಕವಾಗಿ ಬೆಳೆಯಬೇಕು; ನಮ್ಮೆಲ್ಲ ಕಾರ್ಯಕರ್ತರ ಅಪೇಕ್ಷೆಯೂ ಇದೇ ಆಗಿದೆ. ನಾವು ಕಾರ್ಯವನ್ನು ತೀವ್ರಗತಿಯಿಂದ ವೃದ್ಧಿಗೊಳಿಸುವುದು ಇಂದು ಅತ್ಯಂತ ಅಗತ್ಯವಾಗಿದೆ. ಈ ವಿಚಾರವನ್ನು ಹಿರಿಕಿರಿಯ ಎಲ್ಲ ಸ್ವಯಂಸೇವಕರೂ ಹೆಚ್ಚು ಹೆಚ್ಚಾಗಿ ಅರ್ಥಮಾಡಿಕೊಂಡಷ್ಟೂ ದೇಶಕ್ಕೆ ಲಾಭವಿದೆ. ಈ ಕಾರ್ಯ ನಮ್ಮದೆಂಬ ಮೋಹದಿಂದ ನಾನು ಹೀಗೆ ಹೇಳುತ್ತಿಲ್ಲ; ಸತ್ಯವಿಚಾರವೆಂದು ಹೇಳುತ್ತಿದ್ದೇನೆ.

## ಅಲಕ್ಷ್ಯ ಸಲ್ಲದು

ನಮ್ಮ ಸುತ್ತಲೂ ಅನೇಕ ವಿಪತ್ತುಗಳು ಬೃಹದಾಕಾರವಾಗಿ ಬೆಳೆಯುತ್ತಿವೆ. ಅವುಗಳನ್ನೆದುರಿಸಲು ಅವಕ್ಕಿಂತಲೂ ತೀವ್ರ ವೇಗ ಹಾಗೂ ದೃಢತೆಯಿಂದ ನಮ್ಮ ಕಾರ್ಯ ಸಹ ನಡೆಯುವುದು ಅವಶ್ಯಕ. ಅನೇಕ

ವರ್ಗಗಳ ಸಂಘದ ಸಂಪರ್ಕವುಳ್ಳ ಹಾಗೂ ಕಾರ್ಯಸ್ವರೂಪದ ಪೂರ್ಣ ಪರಿಚಯವುಳ್ಳ ಕಾರ್ಯಕರ್ತರು ಹಾಗೂ ಸ್ವಯಂಸೇವಕರು ನಮ್ಮಲ್ಲನೇಕರು ಇದ್ದಾರೆ. ಅವರೆಲ್ಲರೂ ಸಂಘಕಾರ್ಯದ ಶೀಘ್ರಬೆಳವಣಿಗೆಯ ಬಗ್ಗೆ ಗಂಭೀರ ವಾಗಿ ವಿಚಾರ ಮಾಡಬೇಕು. ಕಾರ್ಯದ ಹಾಗೂ ಪರಿಸ್ಥಿತಿಯ ಯಥಾರ್ಥ ಜ್ಞಾನದ ಅಭಾವದಿಂದ ಕಾರ್ಯ ಕುಂಠಿತವಾಗುತ್ತದೆ. ಇದಲ್ಲದೆ ಇನ್ನೂ ಭಿನ್ನ ಭಿನ್ನ ಕಾರಣಗಳೂ ಇವೆ. 'ಪರಿಸ್ಥಿತಿ ಕೆಟ್ಟರೆ ನನಗೇನು ?' ಎಂಬ ಕ್ಷುದ್ರ, ನಿಕೃಷ್ಟ ವಿಚಾರವೂ ಅವುಗಳಲ್ಲೊಂದು. ಆದರೆ ಈ ವಿಚಾರ ನಮ್ಮಲ್ಲಿ ಯಾರಲ್ಲೂ ಇಲ್ಲವೆಂಬ ವಿಶ್ವಾಸ ನನಗಿದೆ.

## ನಮ್ಮದು ಭಾವಾತ್ಮಕ ಕಾರ್ಯ

ನಮ್ಮ ದೇಶದಲ್ಲಿ ಇಂದು ಅನೇಕ ಅನ್ಯಾನ್ಯ ಕಾರ್ಯಗಳು ನಡೆದಿವೆ. ದೊಡ್ಡ ದೊಡ್ಡ ಘೋಷಣೆಗಳು ಸಹ ಕೇಳಿಬರುತ್ತಿವೆ. ಆದರೆ ಎಲ್ಲ ಸಮಸ್ಯೆಗಳ ಮೂಲವನ್ನರಿತು ವಿಶುದ್ಧ ರಾಷ್ಟ್ರದೃಷ್ಟಿಯಿಂದ ಅದನ್ನು ಬಗೆ ಹರಿಸಲು ಹೊರಟಿರುವುದು ಸಂಘವೊಂದೇ ಎಂಬುದು ಸ್ಪಷ್ಟವಾಗಿದೆ. ಉಳಿದೆಲ್ಲ ಸಾರ್ವಜನಿಕ ಸಂಸ್ಥೆಗಳೂ ಭ್ರಾಂತ ರಾಷ್ಟ್ರವಾದವನ್ನು ಹಿಡಿದು ಹೊರಟಿವೆ. ಭಾರತವು ಹಿಂದೂರಾಷ್ಟ್ರವೆಂದು ಹೇಳುವ ಕೆಲವು ಸಂಸ್ಥೆಗಳಿವೆ; ಆದರೆ ಅವುಗಳ ಹಿಂದೂರಾಷ್ಟ್ರದ ಕಲ್ಪನೆ ಪ್ರತಿಕ್ರಿಯಾತ್ಮಕವಾಗಿದೆ. ಭಾವಾತ್ಮಕ ರಾಷ್ಟ್ರದ ವಿಶುದ್ಧ ಸಾಕ್ಷಾತ್ಕಾರವನ್ನು ಅಂತಃಕರಣದಲ್ಲಿ ಆವಾಹನೆ ಮಾಡುವ ಪರಮ ಸೌಭಾಗ್ಯದ ಕಾರ್ಯ ಸಂಘದ್ದೇ ಆಗಿದೆ. ಅಲ್ಲದೆ, ಇಂದು ಕೆಲವರು ಆರ್ಥಿಕ ಸಮಸ್ಯೆ, ಕೆಲವರು ಸಮಾಜ ಸುಧಾರಣೆ, ಇನ್ನು ಕೆಲವರು ರಾಜಕೀಯ ಕ್ಷೇತ್ರ ಇತ್ಯಾದಿ ಭಿನ್ನ ಭಿನ್ನ ವಿಚಾರಗಳಲ್ಲಿ ಮಗ್ನ ರಾಗಿದ್ದಾರೆ. ಹಲವರಿಗಂತೂ ಪರಕೀಯ ಸಮಾಜಗಳನ್ನು ವಿರೋಧಿಸು ವುದೇ ಗುರಿ. ಹೀಗಾಗಿ ರಾಷ್ಟ್ರದ ಮೂಲಭೂತ ಸಮಸ್ಯೆಯನ್ನು ಯಾರೂ ಯೋಚಿಸುವುದೇ ಇಲ್ಲ. ಅದನ್ನು ಯೋಚಿಸುವ ಪುನೀತ ಭಾಗ್ಯ ಸಹ ಸಂಘದ್ದೇ ಆಗಿದೆ. ಎಂದ ಮೇಲೆ ಆ ಶುದ್ಧ ವಿಚಾರವಾದರೂ ಏನು ? ನಮ್ಮ ಗುರಿ ಹಿಂದೂ ಸಂಘಟನೆ ಎಂದು ಸಂಘ ಹೇಳಿತು. ಹಿಂದೂಸಮಾಜ

ವನ್ನು ಸುವ್ಯವಸ್ಥಿತ, ಸುಸೂತ್ರ ಹಾಗೂ ಅನುಶಾಸನಬದ್ಧಗೊಳಿಸಿ, ಅದರಲ್ಲಿ ಸಾಮರ್ಥ್ಯವನ್ನುಂಟುಮಾಡೋಣವೆಂದೂ ಸಂಘಹೇಳಿದೆ. ಏಕೆ?

## ಪರರನ್ನು ದೂಷಿಸಿ ಫಲವಿಲ್ಲ

ಹಿಂದೂ ಸಮಾಜದ ಸಂಪೂರ್ಣ ಅವನತಿ, ಪರಾಭವ, ದುರ್ದೆಸೆ, ಹೀನತೆ, ದೀನತೆಗಳಿಗೆಲ್ಲ ಅಸಂಘಟಿತತೆ ಹಾಗೂ ಅದರ ಫಲವಾದ ದುರ್ಬಲತೆಯೇ ಕಾರಣವೆಂದು ಇತಿಹಾಸ ಸಾಕ್ಷಿ ನುಡಿಯುತ್ತಿದೆ. ಇದನ್ನೆಂದಿಗೂ ನಾವು ಮರೆಯಬಾರದು. ನಮ್ಮಲ್ಲಿ ಜನಸಂಖ್ಯೆ ಇರಲಿಲ್ಲವೆ? ಬುದ್ಧಿವಂತರಿರಲಿಲ್ಲವೇ? ವಿದ್ಯಾವಂತರು, ವೀರರು ಇರಲಿಲ್ಲವೆ? ಧನ, ಶಸ್ತ್ರಾಸ್ತ್ರಗಳಿರಲಿಲ್ಲವೆ? ಸ್ವಾತಂತ್ರ್ಯವಿತ್ತು; ನಮ್ಮದೇ ರಾಜ್ಯ, ನಮ್ಮದೇ ಸೇನೆಗಳಿದ್ದವು. ರಾಜನೀತಿ ಧುರಂಧರರಿದ್ದರು. ಸರ್ವಕ್ಷೇತ್ರಗಳಲ್ಲೂ ಅತ್ಯಂತ ಕುಶಲರಾದ ಶ್ರೇಷ್ಠ ಸಿದ್ಧಪುರುಷರಿದ್ದರು. ಆದರೂ ನಮ್ಮದೇ ದೋಷ ಪರಕೀಯರ ಯಶಸ್ಸಿಗೆ ದಾರಿಮಾಡಿಕೊಟ್ಟಿತು. ಅವರನ್ನು ದೂಷಿಸುವುದು ಸರಿಯಲ್ಲ.

ಅವರು ಅತ್ಯಾಚಾರಿಗಳು, ಆಕ್ರಮಣಗಾರರು ಎಂದು ಕೆಲವರು ಗೋಳಿಡುತ್ತಾರೆ. ಆದರೆ ಪರಕೀಯರಿಂದ ನಾವು ಆಕ್ರಮಣವನ್ನು ನಿರೀಕ್ಷಿಸದಿರುವುದಕ್ಕೆ ಅವರೇನು ನಮ್ಮ ನೆಂಟರೆ? ಸಹಜವಾಗಿ ಪರಕೀಯರಿಗೆ ಆಕ್ರಮಣದ ಹಾಗೂ ತಮ್ಮ ಪ್ರಭುತ್ವವನ್ನು ಹರಡುವ ಇಚ್ಛೆ, ಉತ್ಸುಕತೆ ಇದ್ದೇ ಇರುತ್ತದೆ. ಆದ್ದರಿಂದ ಅವರು ಆಕ್ರಮಣಕಾರಿಗಳು, ಆಕ್ರಮಣ ಮಾಡುತ್ತಾರೆ—ಇದಿಷ್ಟನ್ನೇ ನಾವು ಅವರಿಂದ ಅಪೇಕ್ಷಿಸಬೇಕು. ಇಂದು ಅವರು ಸ್ನೇಹವನ್ನು ನಟಿಸುತ್ತಿರಬಹುದು; ಆದರೆ, ಅದೂ ಸಹ ಆಕ್ರಮಣದ ಪೂರ್ಣಸಿದ್ಧಿಗಾಗಿಯೇ ಆಗಿದೆ. ಅವರಿಗೆ ಆಕ್ರಮಣದ ಇಚ್ಛೆ ಇರುವುದು ಸಹಜ. ಪ್ರತಿಯೊಬ್ಬ ಪರಕೀಯನ ಬಗ್ಗೆಯೂ ಹಾಗೆಯೇ ಯೋಚಿಸುವುದು ಒಳ್ಳೆಯದು. ಅವನು ತನ್ನ ಸ್ವಭಾವಸಿದ್ಧಗುಣಕ್ಕನುಸಾರವಾಗಿ ಆಕ್ರಮಣ ನಡೆಸಿದರೆ ಅವನದೇನು ದೋಷವಿದೆ? ಅದಕ್ಕಾಗಿ ಅವನನ್ನು ದೂಷಿಸುವ ಅಗತ್ಯವಿಲ್ಲ. ನಮ್ಮನ್ನು ನಾಯಿಯೊಂದು ಕಚ್ಚಿದರೆ ಏನನ್ನಬಹುದು? ಅದು ಅದರ ಸ್ವಭಾವ; ಅದರಿಂದ ಕಚ್ಚುತ್ತದೆ. ನಾವು ಅದನ್ನು ದೂರವಿಡಲು

ದಕ್ಷತೆ ವಹಿಸಲಿಲ್ಲ. ದೂರವಿಡುವ ದೂರದೃಷ್ಟಿಯನ್ನು—ಸಾಕಷ್ಟು ಅನುಭವ ವಾದ ನಂತರವೂ-ತೋರಿಸಲಿಲ್ಲ. ಆದ್ದರಿಂದ ದೋಷ ನಮ್ಮದೇ. ಕಲ್ಲು ಎಡವಿ ಗಾಯವಾದರೆ-ಕಲ್ಲು ಬಹಳ ಕೆಟ್ಟದ್ದು, ಅದಕ್ಕೊಂದು ಏಟುಕೊಡು-ಎಂದು ಸಣ್ಣ ಮಕ್ಕಳಿಗೂ ಕಲಿಸಿಕೊಡುತ್ತೇವೆ. ಆದರೆ ಕಲ್ಲಿನದೇನು ತಪ್ಪು? ನಮಗೆ ಕಣ್ಣಿದೆ, ಬುದ್ಧಿಯಿದೆ, ಅವನ್ನು ಉಪಯೋಗಿಸದಿರುವುದರ ಫಲ ಅದು, ನಮ್ಮದೇ ತಪ್ಪಿದೆ. ಅನ್ಯರ ಮೇಲೆ ತಪ್ಪುಹೊರಿಸಿ, ಸ್ವತಃ ತಪ್ಪಿಸಿಕೊಳ್ಳಲೆತ್ನಿಸುವುದು ಅತ್ಯಂತ ಹಾನಿಕಾರಕ. ಇದರಿಂದ ನಮ್ಮಲ್ಲಿ ಎಂದೂ ಬದಲಾವಣೆಯಾಗದು. ನಮ್ಮ ಸ್ಥಿತಿ ಮೊದಲಿನಂತೆಯೇ ನಿಂದನೀಯವಾಗಿ ಉಳಿಯುತ್ತದೆ.

### ಶಕ್ತಿಯ ಕೇಂದ್ರೀಕರಣ

ನಮ್ಮ ದುರ್ಬಲತೆಯನ್ನು ಉಪಯೋಗಿಸಿಕೊಂಡೇ ಪರಕೀಯರು ಆಕ್ರಮಣ, ಅತ್ಯಾಚಾರ ನಡೆಸಿ, ನಮ್ಮ ಜೀವನವನ್ನು ಛಿನ್ನವಿಚ್ಛಿನ್ನಗೊಳಿಸಿದರು. ಒಂದು ಸಹಸ್ರಕ್ಕೂ ಹೆಚ್ಚು ವರ್ಷಗಳಿಂದ ಅಸಂಘಟಿತತೆ ಹಾಗೂ ವಿಚ್ಛೇದಕ ಪ್ರವೃತ್ತಿಯ ರೋಗವು ನಮ್ಮ ಸಮಾಜವನ್ನು ಒಳಗಿನಿಂದಲೇ ಕೊರೆದು ಪೊಳ್ಳುಮಾಡುತ್ತಿದೆ. ಈ ರೋಗವನ್ನು ಬೇರುಸಹಿತ ಕಿತ್ತೊಗೆಯಬೇಕು. ನಮ್ಮ ಸಮಾಜದ ಸಹಜ ಏಕಾತ್ಮತೆಯ ಸಾಕ್ಷಾತ್ಕಾರ ಪಡೆಯುತ್ತಾ, ಅದರ ಆಧಾರದ ಮೇಲೆ ನಮ್ಮೆಲ್ಲರ ವಿಚಾರ, ಭಾವನೆ ಹಾಗೂ ಶಕ್ತಿ ಎಲ್ಲವನ್ನೂ ಕೇಂದ್ರೀಕರಿಸಿ, ಅನುಶಾಸನದಿಂದ ಸುವ್ಯವಸ್ಥೆಗೊಳಿಸಬೇಕು. ಪ್ರತಿಯೊಬ್ಬ ವ್ಯಕ್ತಿಯನ್ನೂ ಸುಸಂಪನ್ನ, ಸಮರ್ಥ ಹಾಗೂ ಸುಸಂಸ್ಕಾರಿತನನ್ನಾಗಿ ಮಾಡೋಣ. ಆಗ ಒಂದು ಉತ್ಕೃಷ್ಟ ಸಾಮರ್ಥ್ಯ ಸಮಾಜದ ಅಂಗಪ್ರತ್ಯಂಗಗಳಲ್ಲೂ ಉಂಟಾಗುತ್ತದೆ. ನಮ್ಮ ಸಂಘದ ಶ್ರೇಷ್ಠ ನಿರ್ಮಾತರು ತಮ್ಮ ಮುಂದೆ ಇದೇ ಉದ್ದೇಶವನ್ನಿಟ್ಟುಕೊಂಡಿದ್ದರು.

### ಸ್ವದೇಶಭಕ್ತಿ-ಮೂಲಬಂಡವಾಳ

ಈ ಉದ್ದೇಶವನ್ನು ಸಾಧಿಸುವುದಾದರೂ ಹೇಗೆ ? ಅದಕ್ಕೆ ಮಾರ್ಗವೇನು ? ನಮ್ಮ ಇತಿಹಾಸದಲ್ಲೇ ಇದಕ್ಕೂ ಸಹ ಉತ್ತರವಿದೆ. ನಮ್ಮ ಸಮಾಜವು ವ್ಯವಹಾರಿಕ ಜೀವನದಲ್ಲಿ ಅತಿ ವ್ಯವಸ್ಥಿತ ಹಾಗೂ ಅತೀವ ಶ್ರೇಷ್ಠ

ವಾದ ಒಂದು ರಾಷ್ಟ್ರಜೀವನವನ್ನು ನಿರ್ಮಿಸಿಕೊಂಡಿದೆ. ಈ ಭೂಮಿಯ ಬಗ್ಗೆ ನಮ್ಮ ಜನರು ಹೃದಯದಲ್ಲಿ ಧರಿಸಿರುವ ಸ್ನೇಹ, ಆದರ, ಶ್ರದ್ಧೆ ಇವೇ ಆ ರಾಷ್ಟ್ರಜೀವನದ ಆಧಾರ. ಆ ರಾಷ್ಟ್ರಜೀವನವನ್ನು ಪುನಃ ಪರಿಚಯಿಸಲು ವ್ಯಕ್ತಿವ್ಯಕ್ತಿಯ ಹೃದಯದಲ್ಲಿ ಈ ಭೂಮಿಯ ಬಗ್ಗೆ ಪರಿಪೂರ್ಣ ಶ್ರದ್ಧೆ ಜಾಗೃತಗೊಳಿಸಿ ಇದರ ಪರಿಪೂರ್ಣ ಸಾಕ್ಷಾತ್ಕಾರವನ್ನು ಅಂಕಿತಗೊಳಿಸುವುದು ಅತ್ಯಂತ ಅಗತ್ಯ. ಈ ಭೂಮಿಯ ಬಗ್ಗೆ ನಾವು ಧರಿಸಿ, ಅನುಭವಿಸಿರುವ ಮಾತೃಭಾವನೆಯನ್ನು ಎಲ್ಲರ ಅಂತಃಕರಣದಲ್ಲೂ ಎಚ್ಚರಿಸಬೇಕು. ಸಮಾಜವನ್ನು ಏಕಸೂತ್ರದಲ್ಲಿ ತರಲು ಈ ಒಂದು ಭಾವನೆಯೇ ಸಾಕು.

ಮೂಲತಃ ಒಂದು ತ್ರಿಕಾಲಾಬಾಧಿತ ಏಕಾತ್ಮತೆ ನಮ್ಮೆಲ್ಲರ ಹೃದಯಗಳಲ್ಲೂ ನೆಲಸಿದೆ. ಇಂತಹ ಏಕಾತ್ಮತೆಯನ್ನುಳ್ಳ ಸಮಾಜವೇ ರಾಷ್ಟ್ರ. ಈ ರಾಷ್ಟ್ರತ್ವದ ಅನುಭವ, ಅಭಿಮಾನಗಳು ಜಾಗೃತವಾಗಬೇಕು. ರಾಷ್ಟ್ರದ ಬಗೆ ಅಂತಃಕರಣದಲ್ಲಿ ಮೂಲಭೂತ ಶ್ರದ್ಧೆ ನಿರ್ಮಾಣವಾಗಬೇಕು. ಇದರಿಂದ ಏಕಾತ್ಮ ಸಮಾಜಧಾರಣೆಯು ದೃಢಗೊಳ್ಳುತ್ತದೆ. ದೃಢವಾದ ಧಾರಣೆಯಿಂದ ರಾಷ್ಟ್ರದ ದಾಯಿತ್ವವನ್ನು ಪೂರ್ಣಗೊಳಿಸುವ ಪ್ರೇರಣೆ ದೊರೆಯುತ್ತದೆ. ಇತಿಹಾಸದ ಪಾಠ ಇದು.

## ಹಿಂದೂಸ್ಥಾನದ ಪುತ್ರ ಹಿಂದು

ಆದ್ದರಿಂದ ನಾವು ಏಕಾತ್ಮ ಸಂಘಟಿತ ಜೀವನದ ನಿರ್ಮಾಣಕ್ಕಾಗಿ ರಾಷ್ಟ್ರತ್ವದ ಚಿರಂತನ ಭಾವನೆಯನ್ನು ಆಧಾರವಾಗಿಟ್ಟುಕೊಂಡಿದ್ದೇವೆ. ಮಾತೃಭೂಮಿಯ ಭಕ್ತಿಯ ಸಂಸ್ಕಾರ ಇದರಲ್ಲಡಗಿದೆ. ಹೀಗೆ ಮಾತೆಯ ರೂಪದಲ್ಲಿ ನಮ್ಮ ಭೂಮಿಯನ್ನು ಕಂಡು, ಸಮಾಜವೆಲ್ಲವೂ ಒಂದು ಪರಿವಾರವೆಂಬುದನ್ನು ನಾವು ಅರಿತಿದ್ದೇವೆ. ಆ ಪಾರಿವಾರಿಕ ಹಾಗೂ ಕೌಟುಂಬಿಕ ಭಾವನೆ ಮತ್ತು ಅದರ ಬಗ್ಗೆ ವ್ಯಕ್ತಿಗಿರುವ ದಾಯಿತ್ವದ ಜ್ಞಾನವನ್ನೇ–ನಮ್ಮ ಸಂಘಟಿತ ಜೀವನದ ಆಧಾರವನ್ನಾಗುಳ್ಳ ಚಿರಂತನ ರಾಷ್ಟ್ರಜೀವನವನ್ನೇ–ನಾವು ವಿಶುದ್ಧ ರೂಪದಲ್ಲಿ ಆವಾಹಿಸಬೇಕಾಗಿದೆ. ಆದರಿಂದಲೇ ನಾವು ಮಾತೃಭೂಮಿಯ

ಧೂಳಿನ ಕಣಕಣದ ರಕ್ಷಣೆಗಾಗಿ, ಅದನ್ನು ಎಲ್ಲ ರೀತಿಯಲ್ಲೂ ಸುರಕ್ಷಿತ ಹಾಗೂ ಸನ್ಮಾನಿತವಾಗಿಡುವುದಕ್ಕಾಗಿ ಶರೀರವನ್ನೇ ಅರ್ಪಿಸಬೇಕಾಗಿ ಬಂದರೂ ಸಹ ಅದೊಂದು ಆನಂದದ, ಸೌಭಾಗ್ಯದ ಸಂಗತಿ ಎಂಬುದನ್ನು ದಿನನಿತ್ಯ ಹೃದಯದಲ್ಲಿ ಜಾಗೃತಗೊಳಿಸಿಕೊಳ್ಳುತ್ತೇವೆ. ಈ ಭೂಮಿಯ ಪುತ್ರ ಸ್ವರೂಪದಲ್ಲಿ ನಮ್ಮ ಹಿಂದೂ ರಾಷ್ಟ್ರವಿದೆ; ಇದರ ಅಂಗಭೂತ ಘಟಕರು ನಾವು; ಈ ಹಿಂದೂ ರಾಷ್ಟ್ರದ ದಿವ್ಯಪರಂಪರೆಯ ಅನುರೂಪರಾಗೋಣ; ಸುಸಂಘಟಿತ ಏಕಾತ್ಮ ಶಕ್ತಿಯ ಆವಿಷ್ಕಾರ ಮಾಡೋಣ; ಮಾತೃಭೂಮಿಯನ್ನು ಪರಮ ವೈಭವಸಂಪನ್ನಗೊಳಿಸೋಣ- ಈ ರೀತಿಯ ಸದ್ವಿಚಾರಗಳ ಸಂಸ್ಕಾರವು ನಮ್ಮ ಅಂತಃಕರಣದಲ್ಲಿ ಅಚ್ಚಳಿಯದೆ ಅಂಕಿತವಾಗುವಂತೆ ನಾವು ಶಬ್ದಗಳನ್ನುಚ್ಚರಿಸುತ್ತೇವೆ ಹಾಗೂ ಅದೇರೀತಿ ವ್ಯವಹರಿಸುವುದರಲ್ಲೂ ತತ್ಪರರಾಗುತ್ತೇವೆ.

## ನಿತ್ಯಸಂಸ್ಕಾರದ ಮಹಿಮೆ

ಈ ಸಂಸ್ಕಾರಗಳಿಗಾಗಿಯೇ ಕಾರ್ಯದ ರಚನೆಯೂ ಆಗಿದೆ. ಸಂಸ್ಕಾರವೆಂದಿಗೂ ಒಂದು ದಿನದಲ್ಲಾಗುವುದಿಲ್ಲ. ಒಂದೆರಡುಬಾರಿ ದೊಡ್ಡ ತತ್ವಗಳನ್ನು ಕೇಳಿದ ಮಾತ್ರಕ್ಕೆ ಅವು ನಮ್ಮ ಹೃದಯದಲ್ಲಿ ಬೇರೂರುವುದಿಲ್ಲ. ಒಬ್ಬೊಬ್ಬರು ಸದ್ಗುಣಗಳನ್ನು ಕೇಳಿದ ಕೂಡಲೇ ಗ್ರಹಿಸುತ್ತಾರೆ; ಅವರಿಗೆ ಅದನ್ನು ನಿರಂತರ ಅಭ್ಯಾಸಮಾಡುವ ಆಗತ್ಯವಿರುವುದಿಲ್ಲ. ಅಂತಹವರು ಎಷ್ಟೋ ಶತಕಗಳಿಗೊಬ್ಬರು ಹುಟ್ಟುತ್ತಾರೆ. ನಾವಂತೂ ಅಂತಹವರಲ್ಲ. ನಾವು ಸಾಮಾನ್ಯ ಜನರು. ಅನೇಕಬಾರಿ ಅಭ್ಯಾಸ ಮಾಡಿದ ನಂತರವೇ ಒಂದು ಗುಣ ನಮಗೆ ಸಿದ್ಧಿಸಬಲ್ಲದು. ಆದರೆ ಸುತ್ತಲೂ ಇರುವ ವಾತಾವರಣದಲ್ಲಿ ಆ ಗುಣ ಲುಪ್ತವಾಗದಂತೆ ನಾವು ಎಚ್ಚರವಹಿಸಬೇಕು. ಏಕೆಂದರೆ ಯಾವುದಾದರೂ ಒಳ್ಳೆಯ ವಿಚಾರ ಕೇಳುವುದಕ್ಕೆ ನಮಗೆ ಸ್ವಲ್ಪಕಾಲ ಬಹಳ ಆನಂದವಾಗುತ್ತದೆ. ಆದರೆ ಕಾರ್ಯಗತ ಮಾಡುವ ಮೊದಲೇ ಅದು ಮರೆತು ಹೋಗುತ್ತದೆ. ಅದಕ್ಕೊಂದು ಸಣ್ಣ ನಿದರ್ಶನ ಹೇಳುತ್ತೇನೆ.

ಪ್ರತಿನಿತ್ಯ ಮಾಡುವ ಕೆಲಸದ ಸಣ್ಣ ವೃತ್ತವನ್ನು ಆಯಾದಿನ ಬರೆದಿಡಿ ಎಂದು ಮೊದಲು ನನ್ನ ಅಧಿಕಾರಿಗಳು ಹೇಳುತ್ತಿದ್ದರು. ಇದಕ್ಕೆ ಇಂಗ್ಲಿಷಿ

ನಲ್ಲಿ 'ಡೈರಿ' ಎನ್ನುತ್ತಾರೆ. ನಮ್ಮಲ್ಲನೇಕ ಉತ್ತಮ ವ್ಯಕ್ತಿಗಳು ಅದನ್ನು ಬರೆಯುವ ದೃಢನಿಶ್ಚಯ ಮಾಡುತ್ತಿದ್ದರು. ವಿಜಯದಶಮಿ ಅಥವಾ ಯುಗಾದಿಯಿಂದ ಪ್ರಾರಂಭಿಸಿ, ಸರಿಯಾಗಿ ದಿನನಿತ್ಯವೂ ಬರೆಯುತ್ತೇವೆಂದು ಹೇಳುತ್ತಿದ್ದರು. ಆದರೆ ಅವರ ನಿಶ್ಚಯ ಅನೇಕ ಬಾರಿ ಮೊದಲ ದಿನವೇ ಕೊನೆಗೊಳ್ಳುತ್ತಿತ್ತು. ಒಂದೆರಡು ದಿನ ಮುಂದುವರಿದರೂ, ನಂತರ ನಿಂತು ಹೋಗುತ್ತಿತ್ತು. 'ನಾಳೆ ಬರೆದರಾಯಿತು' ಎಂದು ಹೇಳಿಕೊಂಡು ಒಂದು ಹಾಳೆ ಖಾಲಿಬಿಡುತ್ತಿದ್ದರು. ಮರುದಿನ ಪುನಃ ಮರೆವು; ಹೀಗೆಯೇ ಪುಸ್ತಕ ವೆಲ್ಲ ಖಾಲಿ; ಕಡೆಗೆ ಆ ವ್ಯಕ್ತಿಯ ನಿಶ್ಚಯವೂ ಖಾಲಿ ! ಆದ್ದರಿಂದ ನಾವು ದಿನನಿತ್ಯ ನಿರಂತರ ಅಭ್ಯಾಸ ಮಾಡುವುದು ಅತ್ಯಂತ ಅಗತ್ಯ.

ನಮ್ಮ ನಿತ್ಯದ ಅನುಭವವನ್ನೇ ನಾವು ತೆಗೆದುಕೊಳ್ಳೋಣ. ನಮ್ಮ ಶರೀರವಿದೆ. ಶರೀರವನ್ನು ಬಲಿಷ್ಠಗೊಳಿಸಲು–ನಿತ್ಯ ವ್ಯಾಯಾಮ ಮಾಡಿ, ಸೂರ್ಯನಮಸ್ಕಾರಮಾಡಿ, ಕುಸ್ತಿ ಕಲಿಯಿರಿ–ಎಂದು ತಿಳಿದವರು ಹೇಳು ತ್ತಾರೆ. ದಿನನಿತ್ಯದ ನಿಯಮಪೂರ್ವಕ ಅಂಗಸಾಧನೆಯಿಂದ ಶರೀರಕ್ಕೆ ಶಕ್ತಿ ಬರುತ್ತದೆ, ಸ್ಫೂರ್ತಿ ಬರುತ್ತದೆ, ಚುರುಕುತನ ಬರುತ್ತದೆ. ಹಾಗೆ ಮಾಡದೆ, ಒಂದೆರಡು ದಿನ ಮಾತ್ರ ಮಾಡಿದರೆ ಏನು ಪ್ರಯೋಜನ ? ನನ್ನ ತಂದೆಯವರ ಬಾಲ್ಯ ಸ್ನೇಹಿತರೊಬ್ಬರಿದ್ದರು. ಇಬ್ಬರೂ ಒಂದೇ ಶಾಲೆಯಲ್ಲಿ ಓದುತ್ತಿದ್ದರು. ಆಗ ನಡೆದ ಸಂಗತಿ ಇದು. ತಂದೆಯವರ ಮಿತ್ರರ ಶರೀರ ಬಹಳ ಕೃಶವಾಗಿತ್ತು. ಅವರು ಪಾಠಶಾಲೆಗೆ ಹೋಗುತ್ತಿದ್ದಾಗ ಒಮ್ಮೆ ಒಬ್ಬ ಸಹಪಾಠಿ ವಿನೋದ ಕ್ಕಾಗಿ ಅವರನ್ನು ಹೊಡೆದ. ಅವರಿಗೆ ಬಹಳ ಕೋಪ ಬಂದಿತು. ಅವನೊಡನೆ ಜಗಳವಾಡಿದರು; ಜಗಳದಲ್ಲೂ ಏಟುಗಳು ಬಿದ್ದವು. ಅದರಿಂದ ಅವರಿಗೆ ವಿದ್ಯಾರ್ಥಿಗಳೆಲ್ಲರ ಎದುರಿನಲ್ಲಿ ಭಾರೀ ಅಪಮಾನವಾಯಿತು. ಕೂಡಲೇ– ನಾನು ಗರಡಿ ಮನೆಗೆ ಹೋಗುತ್ತೇನೆ. ವ್ಯಾಯಾಮ ಮಾಡಿ ಶಕ್ತಿವಂತನಾಗಿ ಇವನನ್ನು ಹೊಡೆಯಲೇಬೇಕು–ಎಂದು ನಿಶ್ಚಯ ಮಾಡಿದರು. ನಿಶ್ಚಯ ವಂತೂ ಬಹಳ ಒಳ್ಳೆಯದಿತ್ತು. ಮರುದಿನ ಬೆಳಗ್ಗೆ ಗರಡಿ ಮನೆಗೆ ಹೋದರು. ಅಲ್ಲಿ ಅನೇಕರು ವ್ಯಾಯಾಮ ಮಾಡುತ್ತಿದ್ದರು. ಅವರನ್ನು ನೋಡಿ ಇವರೂ

ದಂಡ, ಬೈಠಕ್ ಹೊಡೆದರು. ಅಲ್ಲಿ ವ್ಯಾಯಾಮದ ಅನೇಕ ಸಾಧನಗಳಿದ್ದವು. ಅವನ್ನೆಲ್ಲಾ ಉಪಯೋಗಿಸಿ ವ್ಯಾಯಾಮ ಮಾಡಿದರು. ಕಡೆಗೆ ಕುಸ್ತಿಗೂ ಇಳಿದರು. ಆದರೆ ಅಲ್ಲಿದ್ದವರು ಯಾರೂ ಕುಸ್ತಿ ಮಾಡಲು ಮುಂದೆ ಬರಲಿಲ್ಲ. 'ಛೇ ಕುಸ್ತಿಮಾಡಲು ಇಷ್ಟೊಂದು ಹೆದರಿಕೆಯೆ ?' ಎಂದು ಮೂದಲಿಸ ತೊಡಗಿದರು. ಅಷ್ಟರಲ್ಲೇ ವ್ಯಾಯಾಮ ಶಾಲೆಯ ಪ್ರಮುಖರು ಬಂದರು. ಅವರು ಇವರನ್ನು ಮಣ್ಣಿನಲ್ಲಿ ಸ್ವಲ್ಪ ಉರುಳಾಡಿಸಿ ಹೊರಕ್ಕೆ ಬಿಟ್ಟರು. ಹೀಗೆ ಒಂದು-ಒಂದೂಕಾಲುಘಂಟೆ ವ್ಯಾಯಾಮ ಮಾಡಿದ ನಂತರ ಮನೆಗೆ ಹಿಂದಿರುಗಿದರು. ಕೈಕಾಲು ಮುಟ್ಟಿನೋಡಿಕೊಂಡು, 'ಪರವಾಗಿಲ್ಲ, ಇನ್ನು ನಾನು ಅವನನ್ನು ಹೊಡೆಯ ಬಲ್ಲೆ' ಎಂದುಕೊಂಡರು. ರಾತ್ರಿ ಮಲಗಿದರು; ಮರುದಿನ ಬೆಳಗಾಯಿತು; ಆದರೆ, ಅವರಿಗೆ ಏಳುವುದಕ್ಕೇ ಆಗಲಿಲ್ಲ. ಒಂದೇ ದಿನದಲ್ಲಿ ವರ್ಷದ ವ್ಯಾಯಾಮವಾಗಿತ್ತು. ವ್ಯಾಯಾಮಶಾಲೆಗೇಕೆ ಬರಲಿಲ್ಲ, ಪಾಠಶಾಲೆಗೂ ಏಕೆ ಹೋಗಲಿಲ್ಲ ? ಎಂದು ನೋಡಲು ಅವರ ಅನೇಕ ಮಿತ್ರರು ಬಂದರು. ಅಲ್ಲಿ ಅವರು ಕೈಕಾಲು ನೋವಿನಿಂದ ಹಾಸಿಗೆಯಲ್ಲೆ ಬಿದ್ದಿರುವುದನ್ನು ಕಂಡರು. 'ಛಾಯೀ ! ಏನಾಯಿತು ?' ಎಂದು ಕೇಳಿದರು. ಅವರು ಕಷ್ಟದಿಂದ ಹೇಳಿದರು 'ಗರಡಿಮನೆಗೆ ಹೋಗಿದ್ದೆ....'. ಮಿತ್ರರೆಂದರು 'ಓಹೋ, ಬಹಳ ಒಳ್ಳೆಯದು, ಆದರೆ ಹೀಗೆ ಇನ್ನೂ ಮಲಗಿರುವುದೇತಕ್ಕೆ ?' ಪಾಪ ! ಅವರು ಏನೂ ಉತ್ತರಿಸಲೇ ಇಲ್ಲ.

ಕೇವಲ ಒಂದು ದಿನ ಮಾಡಿದರೆ ಪ್ರಯೋಜನವಿಲ್ಲ. ಬದಲು ನಮಗೆ ಹಾನಿಯೇ ಆಗುತ್ತದೆ. ಆದರೆ ದಿನ ಪ್ರತಿದಿನ ಯೋಗ್ಯರೀತಿಯಲ್ಲಿ ವ್ಯಾಯಾಮ ಮಾಡುವವನು ಬಲಿಷ್ಠನಾಗುತ್ತಾನೆ. ಕೆಲವರು ಸೌದೆ ಒಡೆಯುವ ವ್ಯಾಯಾಮ ಮಾಡುತ್ತಾರೆ. ಅವರ ಶರೀರ ಸಶಕ್ತವಾಗಿರುತ್ತದೆ. ಇದು ಅನುಭವದ ಮಾತು. ಆದರೆ ಕೆಲವರು ಸೌದೆ ಒಡೆಯುವ ಉದ್ಯೋಗವನ್ನೇ ಮಾಡುತ್ತಾರೆ. ನಾಲ್ಕು ಮಣ, ಹತ್ತು ಮಣ, ಒಂದು ಕಾಡಿನಷ್ಟು ಸೌದೆ ಬೇಕಾದರೂ ಒಡೆಯುತ್ತಾರೆ. ಒಡೆಯಲು ಸಿಕ್ಕದಿದ್ದ ದಿನ ಏನೂ ಮಾಡದೆ ಸುಮ್ಮನಿರುತ್ತಾರೆ. ಆದರೆ ಅವರ ಶರೀರ ಬಲಿಷ್ಠವಾಗಿರುವುದಿಲ್ಲ. ಯೋಗ್ಯ

ರೀತಿಯಲ್ಲಿ ನಿರಂತರವಾಗಿ ನಿಯಮಪೂರ್ವಕವಾಗಿ, ಸಮಯಕ್ಕೆ ಸರಿಯಾಗಿ ವ್ಯಾಯಾಮ ಮಾಡಿದರೆ ಮಾತ್ರ ಬಲ, ತೇಜಸ್ಸು, ಚೈತನ್ಯ ಪ್ರಾಪ್ತವಾಗುತ್ತದೆ. ಪ್ರಥಮ ಮಹಾಯುದ್ಧವಾದಾಗ ಜರ್ಮನಿಗೆ ಬಹಳ ಹಾನಿಯಾಗಿತ್ತು. ತಮ್ಮ ದೇಶದ ಸರ್ವಾಂಗೀಣ ಉನ್ನತಿ ಸಾಧಿಸಲು ಜರ್ಮನರು ತಮ್ಮ ಪ್ರಸಿದ್ಧ ಸೇನಾಧಿಪತಿ ಫೀಲ್ಡ್ ಮಾರ್ಶಲ್ ಹಿಂಡೆನ್‌ಬರ್ಗ್ ಅವರನ್ನು ಅಧ್ಯಕ್ಷರನ್ನಾಗಿ ಮಾಡಿದರು. ಆಗ ಅವರಿಗೆ ೮೦ ವರ್ಷ ವಯಸ್ಸಾಗಿತ್ತು. ಇಂದು ಇಲ್ಲಿ ನಮ್ಮಲ್ಲಿ ಅಷ್ಟು ವೃದ್ಧರಾದವರು ಯಾರೂ ಇಲ್ಲ. ಇಷ್ಟೊಂದು ವೃದ್ಧರಾಗಿದ್ದರೂ, ಅವರು ಆರೋಗ್ಯವಾಗಿ ದೃಢಕಾಯರಾಗಿದ್ದರು. ಅವರ ನೇತೃತ್ವದಲ್ಲಿ ಜರ್ಮನಿ ಪುನಃ ಸರ್ವಪಿಥದಲ್ಲಿ ಪ್ರಗತಿ ಹೊಂದಿ ಮೇಲೆದ್ದಿತು. "ಈ ವಯಸ್ಸಿನಲ್ಲಿ ನಿಮಗೆ ಇಷ್ಟು ಸಾಮರ್ಥ್ಯ, ಸ್ಫೂರ್ತಿ, ಉತ್ಸಾಹ ಎಲ್ಲಿಂದ ಬಂದಿತು ?" ಎಂದು ಜನರು ಆಶ್ಚರ್ಯದಿಂದ ಅವರನ್ನು ಕೇಳುತ್ತಿದ್ದರು. "ನಾನು ಪ್ರತಿದಿನ ಒಂದು ಘಂಟೆ ನಿಯಮಪೂರ್ವಕವಾಗಿ ಸೌದೆ ಒಡೆಯುತ್ತೇನೆ. ಆದರಿಂದ ನನ್ನಲ್ಲಿ ಸಹನಶಕ್ತಿ, ಬಲ, ಹಾಗೂ ಸಾಮರ್ಥ್ಯಗಳಿವೆ" ಎಂದು ಆ ವೃದ್ಧ ಸೇನಾಧಿಪತಿ ಉತ್ತರಿಸುತ್ತಿದ್ದರು. ಸೌದೆ ಒಡೆಯುವುದು ಸಣ್ಣ ವಿಚಾರ; ಆದರೆ ನಿಯಮಬದ್ಧವಾಗಿ ಮಾಡುವುದರಿಂದ ಬಹಳ ಲಾಭವಿದೆ.

### ಶಾಖಾಪದ್ಧತಿ

ಆದ್ದರಿಂದ ವಿಕೃತ ಸಂಸ್ಕಾರಗಳನ್ನು ದೂರಗೊಳಿಸಿ, ಒಳ್ಳೆಯ ಸಂಸ್ಕಾರಗಳನ್ನು ತರಬೇಕಾದರೆ; ಶರೀರ ಬಲವೊಂದೇ ಅಲ್ಲದೆ, ಬುದ್ಧಿಯೂ ಶುದ್ಧವಾಗಬೇಕಾದರೆ ನಿಯಮಪೂರ್ವಕ ಸಂಸ್ಕಾರದ ಆವಶ್ಯಕತೆಯಿದೆಯೆಂದು ಸಂಘದಲ್ಲೂ ಹೇಳುತ್ತೇವೆ. ಜೀವನದ ವಿಕೃತಿಗಳನ್ನೆಲ್ಲ ತೊಡೆದುಹಾಕಿ ಶುದ್ಧ ರಾಷ್ಟ್ರತ್ವದ ಭಾವನೆಯನ್ನುಂಟುಮಾಡಲು, ಅದಕ್ಕನುಸಾರವಾದ ನಿಯಮಪೂರ್ವಕ ಸಂಸ್ಕಾರವನ್ನು ಹೊಂದುವ ವ್ಯವಸ್ಥೆ ಬೇಕು. ಅಂಥ ವ್ಯವಸ್ಥೆಯನ್ನು ಕೃತಿಗಿಳಿಸಿದಾಗಲೇ ಫಲವುಂಟು; ಇಲ್ಲದಿದ್ದರೆ ಇಲ್ಲ. ಕೇವಲ ಘೋಷಣೆ ಕೂಗಿದರೆ, ಉಪನ್ಯಾಸಕೊಟ್ಟರೆ, ಪ್ರವಾಹದಂತೆ ಒಂದು ದೊಡ್ಡ ಮೆರವಣಿಗೆ

ಹೊರಡಿಸಿದರೆ ಕಾರ್ಯವಾಗದು. ಅದರಿಂದ ಕ್ಷಣಕಾಲ ಉತ್ಸಾಹ ಉಕ್ಕಿ ಹರಿಯುತ್ತದೆ, ನಂತರ ಎಲ್ಲವೂ ಬರಿದು. ಆದ್ದರಿಂದ ನಮ್ಮಲ್ಲಿ ನಿತ್ಯ ಹಾಗೂ ನಿಯಮಪೂರ್ವಕವಾಗಿ ಸಮಯದ ಬಂಧನವನ್ನು ವಿಧಿಸಿಕೊಂಡು ಅದಕ್ಕೊಳಪಟ್ಟು ನಡೆಯುವ ಶಾಖೆಗಳ ನಿರ್ಮಾಣವಾಯಿತು. ನಮ್ಮ ಸಂಘದ ಶ್ರೇಷ್ಠ ನಿರ್ಮಾತರು ಈ ಬಗ್ಗೆ ಬಹಳ ಆಳವಾಗಿ ಆಲೋಚಿಸಿದ್ದರು. ಎಲ್ಲ ಪ್ರಕಾರದ ಮಾರ್ಗಗಳ, ಕಾರ್ಯಗಳ ಅನುಭವ ಅವರಿಗಿತ್ತು. ಆ ಎಲ್ಲ ಅನುಭವಗಳ ಬೆಳಕಿನಲ್ಲಿ ತಮ್ಮ ಸ್ವತಂತ್ರ, ತೇಜಸ್ವೀ ಪ್ರತಿಭೆಯಿಂದ ವಿಚಾರ ಮಾಡಿ ಅವರು ದಿನನಿತ್ಯದ ಶಾಖಾಪದ್ಧತಿಯನ್ನು-ಅತ್ಯಂತ ಸಫಲವಾದ, ಸರಳ ವಾದ ಹಾಗೂ ಎಂದಿಗೂ ನಿಲ್ಲದಂತಹ ಒಂದು ಅತ್ಯಂತ ಶ್ರೇಷ್ಠ ಪದ್ಧತಿಯನ್ನು- ನಮ್ಮ ಮುಂದೆ ಇಟ್ಟರು.

## ಕರ್ಮಕ್ಕೇ ಪ್ರಾಶಸ್ತ್ಯ

ಅವರು ಹೇಳಿದ್ದೇನು ? ಒಂದು ಸ್ಥಾನ, ಒಂದು ಸಮಯ ನಿಶ್ಚಯಿಸಿ ಕೊಳ್ಳಿ; ಆ ನಿಶ್ಚಿತ ಸ್ಥಾನಕ್ಕೆ ನಿಶ್ಚಿತ ಸಮಯದಲ್ಲಿ ದಿನಂಪ್ರತಿ ತಪ್ಪದೆಹೋಗಿ. ಅಲ್ಲಿ ಹೋಗಿ ನಮ್ಮ ಈ ಪವಿತ್ರ ಧ್ವಜವನ್ನು-ಅಜ್ಞಾನದ ವಿನಾಶ ಮಾಡುವ, ನಮ್ಮ ರಾಷ್ಟ್ರದ ಸಮಗ್ರ ದಿವ್ಯಪರಂಪರೆಯ ತೇಜಸ್ವೀ ರೂಪವನ್ನು ಪ್ರಕಟ ಪಡಿಸುವ, ಯಾವುದರ ಛತ್ರಛಾಯೆಯಲ್ಲಿ ನಮ್ಮ ರಾಷ್ಟ್ರವು ಜಗತ್ತಿನಲ್ಲೆಲ್ಲೆ ಲ್ಲೂ ಪರಾಕ್ರಮವನ್ನು ಮೆರೆಯಿಸಿತೋ ಅಂಥ ಪವಿತ್ರ ಭಗವಾಧ್ವಜವನ್ನು- ನಿಮ್ಮ ಮುಂದೆ ಹಾರಿಸಿ; ಆದರಪೂರ್ವಕವಾಗಿ ಪ್ರಣಾಮ ಸಲ್ಲಿಸಿ. ಇದು ನಮ್ಮ ರಾಷ್ಟ್ರದ ಪ್ರತೀಕ; ನಮ್ಮ ರಾಷ್ಟ್ರದ ವ್ಯಕ್ತರೂಪ. ಇದನ್ನು ನೋಡು ತ್ತಲೇ ರಾಷ್ಟ್ರತ್ವ ನಮ್ಮ ಹೃದಯದಲ್ಲಿ ಜಾಗೃತವಾಗುತ್ತದೆ; ನಮ್ಮ ಸಂಪೂರ್ಣ ಜೀವನವನ್ನು ಪುಲಕಿತಗೊಳಿಸುತ್ತದೆ; ಭಾವನೆಗಳ ವಿಶುದ್ಧತ್ವ ನಿರ್ಮಾಣ ವಾಗುತ್ತದೆ. ಅಲ್ಲಿ ಹೋಗಿ ಅದರ ಕಡೆಗೇ ನೋಡುತ್ತಾ ಕುಳಿತುಕೊಳ್ಳ ಬೇಕಾದ್ದಿಲ್ಲ. ಸಂಘಸ್ಥಾನವಾದರೋ ಕರ್ಮಭೂಮಿ; ಅಲ್ಲಿ ಕುಳಿತು ನೋಡುತ್ತಾ “ರೂಪವೂ ನಿನ್ನದೆ, ನಾಮವೂ ನಿನ್ನದೆ” ಎಂದು ಭಜನೆ ಮಾಡುವುದರಿಂದ ಕೆಲಸವಾಗದು. ಕರ್ಮಭೂಮಿಯಲ್ಲಿ ಕರ್ಮಕ್ಕೇ ಪ್ರಾಶಸ್ತ್ಯ, ಕರ್ಮವೇ ನಡೆಯಬೇಕು.

## ದೈವದತ್ತ ಯೋಜನೆ

ಎಂಥ ಕಾರ್ಯ ನಡೆಯಬೇಕು? ರಾಷ್ಟ್ರದ ಸುಪ್ತಶಕ್ತಿಯನ್ನು ಆವಾಹನೆ ಮಾಡುವಂಥ ಕಾರ್ಯ ಮಾಡಿರಿ. ಶರೀರ, ಮನ, ಬುದ್ಧಿಗಳಲ್ಲಿ ಉತ್ಸಾಹದ ಸಂಚಾರವಾಗುವಂತಹ, ಅಂತಃಕರಣದಲ್ಲಿ ನಿರ್ಭಯತೆ ಬೆಳೆಯುವಂತಹ, ನಮ್ಮ ರಾಷ್ಟ್ರದ ವಿವಿಧ ಪರಿಸ್ಥಿತಿಗಳೆದುರು ಧೈರ್ಯದಿಂದ ನಿಲ್ಲಬಲ್ಲ ದೃಢತೆಯನ್ನು ಹೃದಯದಲ್ಲಿ ಅಂಕಿತಗೊಳಿಸುವಂತಹ ಹಾಗೂ ಸೂತ್ರಬದ್ಧ ವ್ಯವಹಾರದ ಶಿಕ್ಷಣವನ್ನು ನಮ್ಮ ಜೀವನದಲ್ಲಿ ತುಂಬುವಂತಹ ಕಾರ್ಯಕ್ರಮಗಳನ್ನು ನಡೆಸಿರಿ. ಏಕಾತ್ಮತೆಯ ಹಾಗೂ ಏಕರೂಪತೆಯ ಅನುಭವ ಹೃದಯಕ್ಕಾಗುವಂತಹ ಕಾರ್ಯಕ್ರಮಗಳನ್ನು ರಚಿಸಿ, ಸಮಾಜವೆಲ್ಲ ಏಕರೂಪವೆಂಬ ಅನುಭೂತಿ ಜನತೆಯ ಹೃದಯದಲ್ಲಿ ಪ್ರಕಟಗೊಳ್ಳುವಂತಹ ಗುಣಗಳನ್ನು ನಮ್ಮ ಅಂತಃಕರಣದಲ್ಲಿ ಧರಿಸಿ, ನಮ್ಮ ಪ್ರಾರ್ಥನೆಯ ಮೂಲಕ ನಮ್ಮ ಸಂಸ್ಕಾರಗಳನ್ನು ಆವಾಹಿಸಬೇಕು. ಪ್ರಾರ್ಥನೆಯನ್ನು ಅಂತಃಕರಣಪೂರ್ವಕವಾಗಿ, ಭಕ್ತಿಪೂರ್ವಕವಾಗಿ ಉಚ್ಚರಿಸಿರಿ. ಈ ರೀತಿಯ ಕಾರ್ಯಕ್ರಮವನ್ನು ನಿಯಮಿತರೂಪದಲ್ಲಿ ಮಾಡುವುದರಿಂದ ಅದರ ಸಂಸ್ಕಾರ ಹೃದಯದಲ್ಲಿ ದೃಢವಾಗಿ ನೆಲೆಗೊಳ್ಳುತ್ತದೆ. ಈ ರೀತಿ ಎಂದೂ ನಿಲ್ಲದಂತಹ, ನಿತ್ಯ ಸಫಲವಾಗುವಂತಹ ಒಂದು ನಿಯಮಿತ ಕಾರ್ಯಕ್ರಮದ ಅಪೂರ್ವ ಪದ್ಧತಿಯು ನಮಗೆ ಮಾತ್ರ ದೊರಕಿದೆ.



ಇದೇ ಪದ್ಧತಿಯು ಇಂದು ನಮ್ಮ ರಾಷ್ಟ್ರದ ಮುಂದಿರುವ ವಿಚ್ಛಿನ್ನ ಜೀವನದ ಅತಿ ದೊಡ್ಡ ಸಮಸ್ಯೆಯನ್ನು ಬಗೆಹರಿಸುತ್ತದೆ; ಇದೇ ಪದ್ಧತಿಯಿಂದ ನಮ್ಮ ಜೀವನದಲ್ಲಿ ಪ್ರಬಲ ಶಕ್ತಿ ನಿರ್ಮಾಣವಾಗುತ್ತದೆ ಹಾಗೂ ಸಮಾಜದಲ್ಲಿ ಏಕರೂಪದ ಹಾಗೂ ಏಕಾತ್ಮತೆಯು ಸಾಕ್ಷಾತ್ಕಾರವಾಗುತ್ತದೆ. ಇದೇ ಪದ್ಧತಿಯಿಂದಲೇ ಸುಸಂಘಟಿತ, ಅನುಶಾಸಿತ, ಶಕ್ತಿಸಂಪನ್ನಯುಕ್ತ ಏಕಾತ್ಮ ಸಮಾಜದ ಸುದೃಢ, ಶಾಶ್ವತ ರಾಷ್ಟ್ರಜೀವನವು ಉತ್ಪನ್ನವಾಗುತ್ತದೆ. ಸಮಾಜಕ್ಕೆ ಮಾತೃಭೂಮಿಯ ಸಂಪನ್ನತೆ ಹಾಗೂ ಭಕ್ತಿಯ ಅನುಭವ ಮಾಡಿಕೊಟ್ಟು, ಸಮಾಜದಲ್ಲಿ ನಮ್ಮ ರಾಷ್ಟ್ರತ್ವದ ಪುನರ್‌ಜಾಗರಣೆ

ಗೈಯುಬಲ್ಲ, ನಮ್ಮ ಮೇಲಿರುವ ದಾಯಿತ್ವಜ್ಞಾನದ ಅರಿವುಮಾಡಿಕೊಟ್ಟು ಆ ಎಲ್ಲ ಸಂಸ್ಕಾರಗಳನ್ನೂ ದಿನ ಪ್ರತಿದಿನ ಹೃದಯದೊಳಗೆ ಜಾಗೃತಗೊಳಿಸಬಲ್ಲ, ಈ ಪದ್ಧತಿ ಪರಮಾತ್ಮನ ಕೃಪೆಯಿಂದಾಗಿಯೇ ನಮಗೆ ಪ್ರಾಪ್ತವಾಗಿದೆ.

## ಸಂಪೂರ್ಣ ಸಮಾಜದ್ದೇ ಸಂಘಟನೆ

ಈ ಪದ್ಧತಿಯನ್ನು ಸ್ವೀಕರಿಸಿ ಕಾರ್ಯಪೂರ್ತಿಯ ದೃಷ್ಟಿಯಿಂದ ನಮ್ಮ ಪೂರ್ಣ ಕರ್ತವ್ಯವನ್ನು ಸ್ವಯಂಸೇವಕರಾದ ನಾವು ಮಾಡುತ್ತಿದ್ದೇವೆಯೆ? ನಮ್ಮ ಕರ್ತವ್ಯವಾದರೂ ಏನು? ಈ ನಿಯಮಬದ್ಧ ಕಾರ್ಯಕ್ರಮ ಹೇಗೆ ನಡೆಯುತ್ತಿದೆ? ಸಮಯ ಬಂಧನಕ್ಕೊಳಪಟ್ಟು, ನಿಯಮಬದ್ಧ - ನಿಯಮಿತ ರೀತಿಯಲ್ಲಿ ದಿನ ಪ್ರತಿದಿನದ ಶಾಖೆಯ ಪೂರ್ಣ ಕಾರ್ಯಕ್ರಮವು ನಮ್ಮ ಕಡೆಯಿಂದಾಗುತ್ತಿದೆಯೇ? ಈ ವಿಚಾರವನ್ನು ನಾವೀಗ ಮಾಡಬೇಕು. ಹಿಂದೂಸಮಾಜಕ್ಕೆ ಸಂಘಟಿತ ಸ್ವರೂಪ ನೀಡಬೇಕಾಗಿದೆ. ಹಿಂದೂಸಮಾಜದಲ್ಲಿ ಕೇವಲ ಒಂದು ಸಂಘಟಿತ ಗುಂಪು ನಿರ್ಮಿಸುವುದು ನಮ್ಮ ಕಾರ್ಯವಲ್ಲ; ಸಂಪೂರ್ಣ ಸಮಾಜವನ್ನೇ ಸಂಘಟಿತಗೊಳಿಸಬೇಕಾಗಿದೆ. ಈ ರಾಷ್ಟ್ರಕ್ಕೆ ನನ್ನ ಕರ್ತವ್ಯವನ್ನು ಸಲ್ಲಿಸಬೇಕು ಎಂಬ ದಾಯಿತ್ವದ ಭಾವನೆಯನ್ನು ಪ್ರತಿಯೊಬ್ಬರ ಅಂತಃಕರಣದಲ್ಲೂ ನಿರ್ಮಾಣಗೊಳಿಸಬೇಕಾಗಿದೆ. ಹಾಗೆ ಮಾಡಲು ನಮ್ಮ ಜೀವನವನ್ನು ಸರ್ವ ಸಂಸ್ಕಾರಯುಕ್ತವಾಗಿ ಮಾಡಿಕೊಂಡಿದ್ದೇವೆಯೇ? ಮತ್ತೊಬ್ಬರ ಮುಂದೆ ನಿಂತು ಮಾತನಾಡುವ ಪಾತ್ರತೆ ನಮ್ಮಲ್ಲಿ ಬಂದಿದೆಯೇ? ನಾವೆಲ್ಲರೂ ಸ್ವಯಂಸೇವಕರೆಂದು ಹೇಳಿಕೊಳ್ಳಬಲ್ಲೆವೆ? ಯಾವ ಶಬ್ದದ ಹಿಂದೆ ನಮ್ಮ ಜೀವನದ ಪರಿಶ್ರಮವಿಲ್ಲವೋ ಆ ಶಬ್ದಕ್ಕೆ ಬೆಲೆಯಿಲ್ಲ. ನಮ್ಮ ಜೀವನವನ್ನು ನೇರ್ಪಡಿಸಿಕೊಂಡು, ನಂತರ ಅದರ ಆಧಾರದ ಮೇಲೆ ಇತರರಿಗೆ ಮಾರ್ಗದರ್ಶನ ಮಾಡಬೇಕು. ಪರೋಪದೇಶದಿಂದ ಪ್ರಯೋಜನವಿಲ್ಲ. ಕಾರ್ಯದ ಆರಂಭ ನಮ್ಮಿಂದಲೇ ಆಗಬೇಕು. ಕಾರ್ಯದ ಬಗ್ಗೆ ಅಭಿಮಾನ ತಾಳಿ, ನಾವು ನಮ್ರತೆಯಿಂದ ಕಾರ್ಯ ನಡೆಸಬೇಕು. ನಮ್ಮದೇ ಅಭಿಮಾನ ಸಲ್ಲದು.

## ನಮ್ಮ ದಾಯಿತ್ವ

ಜನರೂ ತಮ್ಮ ದಾಯಿತ್ವದ ಭಾವನೆಯನ್ನು ಗುರುತಿಸಿ ಕಾರ್ಯ ನಡೆಸಲು ಮುಂದಾಗುತ್ತಾರೆಯೆ ? ಹಾಗಾಗಲು ಯಾವ ರೀತಿ ಪರಿಶ್ರಮಿಸ ಬೇಕು, ಯಾವ ರೀತಿ ಸಮಯ ಕೊಡಬೇಕು, ಬುದ್ಧಿ ಬಳಸಬೇಕು – ಆ ರೀತಿ ನಾವು ಮಾಡುತ್ತೇವೆಯೆ ? ನಮ್ಮ ಸುತ್ತಲೂ ಇರುವ ಮಿತ್ರರ ಬಳಿ ಹೋಗಿ, ಭಿನ್ನ ಭಿನ್ನ ಪ್ರಸಂಗಗಳನ್ನುಪಯೋಗಿಸಿಕೊಂಡು, ಯಾರನ್ನೂ ಬಿಡದೆ, ಅವರೊಡನೆ ಮಾತುಕತೆ, ವಿನೋದ ನಡೆಸುತ್ತಾ; ಅವರೊಡನೆ ನಗುತ್ತಾ ಆಡುತ್ತಾ, ಆದರೆ ನಮ್ಮ ಬುದ್ಧಿಸೂತ್ರವನ್ನು ಬಿಡದೆ ಆ ವ್ಯಕ್ತಿಗಳಿಗೆ ನಮ್ಮ ವಿಚಾರವನ್ನು ಯಾವಾಗಲಾದರೂ ಮುಟ್ಟಿಸುತ್ತೇವೆಯೇ ? ನಾವು ಅದಕ್ಕಾಗಿ ಅನೇಕರ ಬಳಿ ಅನೇಕ ಬಾರಿ ಹೋಗಿ ಅವರಲ್ಲಿ ಕಾರ್ಯದ ಪ್ರೇರಣೆಯನ್ನು ಉತ್ಪಾದಿಸಲು ನಮ್ಮ ಜೀವನವನ್ನು ವಿನಿಯೋಗಿಸುತ್ತಿದ್ದೇವೆ ಯೇ ? ನಮ್ಮ ಶಾಖೆಯ ನಿಯಮಬದ್ಧ ಜೀವನದೊಡನೆ ಒಂದಾಗಿದ್ದೇವೆಯೇ? ಸಂಪೂರ್ಣ ಸಮಾಜವನ್ನು ಸಂಘರೂಪಿಯನ್ನಾಗಿ ಮಾಡಲು ಸಂಘ ಮತ್ತು ಸಮಾಜ ಪರ್ಯಾಯ ವಾಚಕಗಳು – ಎಂದರೆ ಒಂದೇ ಅರ್ಥ, ಎರಡು ಶಬ್ದ – ಆಗುವಂಥ ಪರಿಸ್ಥಿತಿಯನ್ನು ನಿರ್ಮಿಸಲು ಒಂದೊಂದು ಶಾಖೆಯನ್ನೂ ಪರಿಪೂರ್ಣ ವಿಸ್ತಾರಗೊಳಿಸಿ ನಮ್ಮ ಸ್ವಾಭಾವಿಕ ದಾಯಿತ್ವವನ್ನು ಪೂರ್ಣ ಗೊಳಿಸುತ್ತಿದ್ದೇವೆಯೇ ? ಇದನ್ನು ಸಾಧಿಸಲು ನಮ್ಮ ಪ್ರಯತ್ನ ಎಷ್ಟಾಗು ತ್ತಿದೆ ? ಎಂಬ ಬಗ್ಗೆ ನಾವು ಬಹಳ ಗಂಭೀರವಾಗಿ ಆಲೋಚಿಸಬೇಕು.

## ವಿಪತ್ತು ಹೆಚ್ಚುತ್ತಿದೆ

ನಮ್ಮ ಸಮಾಜದಲ್ಲಿ ಏಕತ್ವದ ಭಾವನೆ ಎಷ್ಟೊಂದು ಕಡಿಮೆಯಾಗಿದೆ ? ನಮ್ಮ ಮಾತೃಭೂಮಿಯ ಬಗ್ಗೆ ಸ್ವಾಭಾವಿಕವಾಗಿರಬೇಕಾದಂತಹ ಮಾತೃ ಭಕ್ತಿ ಅದೆಷ್ಟು ಇಳಿದುಹೋಗಿದೆ ? ಒಬ್ಬರೊಡನೊಬ್ಬರು ಸೇರುವುದಿಲ್ಲ; ಅನುಶಾಸನವಿಲ್ಲ, ಚಾರಿತ್ರ್ಯವಿಲ್ಲ; ನಾಲ್ಕೂಕಡೆ ಭ್ರಷ್ಟಾಚಾರ ಹರಡಿದೆ; ರಾಷ್ಟ್ರತ್ವದ ಬಗ್ಗೆ ಎಷ್ಟೊಂದು ಭ್ರಮೆ ಉತ್ಪನ್ನವಾಗಿದೆ ? ದೇಶದ ಶತ್ರುಗಳು

ಬಲಿಷ್ಠರಾಗುತ್ತಿದ್ದಾರೆ; ಇದೆಲ್ಲ ನಮ್ಮ ಕಣ್ಣಿಗೆ ಕಾಣುತ್ತಿಲ್ಲವೆ ? ಒಂದು ಸಹಸ್ರ ವರ್ಷಗಳ ಹಿಂದೆ ಇದೇ ದುರ್ಗುಣಗಳ ಲಾಭವನ್ನು ಶತ್ರುಗಳು ಪಡೆದಿದ್ದರು.

ಒಂದು ಸಾವಿರ ವರ್ಷಗಳ ಹಿಂದೆ ಮುಸಲ್ಮಾನರು ಇಲ್ಲಿಗೆ ಬಂದರು. ಕೆಲಕಾಲ ಅವರ ಆಕ್ರಮಣ ಸಫಲಹೊಂದುತ್ತಿತ್ತು. ಅವರಿಲ್ಲಿ ರಾಜ್ಯವನ್ನು ಪ್ರಸ್ಥಾಪಿಸಿದರು. ಆದರೆ ಇಲ್ಲಿಯ ರಾಷ್ಟ್ರೀಯ ಸಮಾಜವು ಜಾಗೃತವಾಗಿ ಅವರ ಆಕಾಂಕ್ಷೆಗಳನ್ನು ತುಂಡರಿಸಿ, ಅವರ ಸಾಮ್ರಾಜ್ಯವನ್ನು ನಷ್ಟಗೊಳಿಸಲು ಆನೇಕಬಾರಿ ಪ್ರಯತ್ನಿಸಿತು. ಆ ಪ್ರಯತ್ನಗಳಿಗೆ ಸಾಕಷ್ಟು ಸಫಲತೆಯೂ ಸಿಕ್ಕಿತ್ತು. ಆದರೆ ಅಷ್ಟರಲ್ಲೆ ಅಂಗ್ಲರ ಆಕ್ರಮಣವಾಯಿತು. ನಮ್ಮ ದೇಶ ಈ ಹೊಸ ಆಕ್ರಮಣಕ್ಕೆ ಭಕ್ಷ್ಯವಾಯಿತು. ಬ್ರಿಟಿಷರ ಬಾಲ ಹಿಡಿದು ಹನ್ನೆರಡು ವರ್ಷಗಳ ಹಿಂದೆ ಮುಸಲ್ಮಾನರು ಭಾರತಮಾತೆಯನ್ನು ಭಂಗಗೊಳಿಸಿದರು. ಪುನಃ ಅದೇ ಉದ್ದೇಶಕ್ಕಾಗಿ ಅವರ ಶಕ್ತಿ ತಲೆಯೆತ್ತುತ್ತಿದೆ. ಹಿಂದೂಗಳಲ್ಲಿ ದೇಶಭಕ್ತಿಯ ಭಾವನೆಯನ್ನು ನಷ್ಟಗೊಳಿಸಿ, ಅವರನ್ನು ಅರಾಷ್ಟ್ರೀಯರನ್ನಾಗಿ ಮಾಡಿ ಪುನಃ ಇಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸುವ ಉದ್ದೇಶದಿಂದ ಕ್ರೈಸ್ತರು ತಮ್ಮ ಮತಪ್ರಚಾರ ನಡೆಸುತ್ತಿದ್ದಾರೆ. ಇದೆಲ್ಲ ನಮ್ಮ ಕಣ್ಣಿಗೆ ಕಾಣುವುದಿಲ್ಲವೆ ? ಕಾಣಲೇಬೇಕು. ನಮ್ಮ ರಾಷ್ಟ್ರದ ಬಗ್ಗೆ ಸದ್ವಿಚಾರವನ್ನುಳ್ಳ ಪ್ರತಿಯೊಬ್ಬನಿಗೂ–ಆಕ್ರಮಣ ಇನ್ನೂ ಜೀವಂತವಿದೆ, ಹಿಂದೂಸಮಾಜ ಹೆಚ್ಚು ಹೆಚ್ಚು ಸಂಕಟಕ್ಕೊಳಗಾಗುತ್ತಿದೆ—ಎಂಬ ವಿಚಾರ ಸ್ಪಷ್ಟವಾಗಿ ಗೋಚರಿಸುತ್ತಿದೆ.

## ಹೆಚ್ಚು ಭೀಕರ ಆಕ್ರಮಣ

ಹಿಂದೆ ಕೇವಲ ವಾಯುವ್ಯದ ಗಡಿಯಿಂದ ಮಾತ್ರ ಆಕ್ರಮಣ ವಾಗುತ್ತಿತ್ತು. ಆದರೆ ಇಂದು ವಾಯುವ್ಯದಿಂದ ಹಿಡಿದು ಈಶಾನ್ಯದ ವರೆಗೆ ಸಂಪೂರ್ಣ ಉತ್ತರದ ಮೇರೆಯಲ್ಲಿ ಆಕ್ರಮಣ ನಡೆದಿದೆ. ಪರಕೀಯರನ್ನು ಇಲ್ಲಿಗೆ ಆಹ್ವಾನಿಸಿ, ನಂತರ ಅವರೊಡನೆಯೇ ಸೇರಿ ತಮ್ಮದೇ ಸಮಾಜದಮೇಲೆ

ಧಾಳಿಮಾಡುವ ರಾಷ್ಟ್ರಘಾತಕರು ಈ ಇಪ್ಪತ್ತನೆಯ ಶತಮಾನದಲ್ಲೂ ನಮ್ಮಲ್ಲಿ ಇದ್ದಾರೆ. ಇಂದಿನ ಆಕ್ರಮಣ ಹಿಂದಿನದಕ್ಕಿಂತಲೂ ಬಹುಪಾಲು ಹೆಚ್ಚು ಭಯಂಕರವಾಗಿದೆ; ಇಡೀ ಸಮಾಜವನ್ನೇ ಬೇರುಸಹಿತ ಕಿತ್ತೊಗೆಯುವಷ್ಟು ಭೀಕರವಾಗಿದೆ. ಇಂತಹ ಸಂಕಟ ಸಮಯದಲ್ಲಿ ರಾಷ್ಟ್ರವನ್ನು ವಿಪತ್ತಿನಿಂದ ಮುಕ್ತಿಗೊಳಿಸಿ, ಪರಮ ವೈಭವಕ್ಕೊಯ್ಯುವ ಸಲುವಾಗಿ ನಮ್ಮೆಲ್ಲ ಶಕ್ತಿಯನ್ನೂ ಕಾರ್ಯಕ್ಕಾಗಿ ಸುರಿಸುವ ಹಾಗೂ ಸಂಪೂರ್ಣ ವಿಶ್ವಾಸದಿಂದ ಕಾರ್ಯಕ್ಕೆ ಜೀವನವನ್ನು ಅಳವಡಿಸಿಕೊಂಡು ಸಂಘಕಾರ್ಯದ ಪ್ರಸಾರದಲ್ಲಿ ಪ್ರವೃತ್ತರಾಗಬೇಕಾಗಿದೆ.

## ಆತ್ಮವಂಚನೆ ಆಗಬಾರದು

ಆದರೆ ಕೆಲವರು ಸಂಘದ ಕೆಲಸ ಮಾಡುವುದಕ್ಕೆ ಸಮಯ ಸಿಗುವುದಿಲ್ಲ ವೆನ್ನುತ್ತಾರೆ. ಇಂದಿನ ತುಟ್ಟಿಯ ದಿನಗಳಲ್ಲಿ ಪಾರಿವಾರಿಕ ಖರ್ಚುಗಳಿಗಾಗಿ ಹೆಚ್ಚು ಧನಾರ್ಜನೆ ಮಾಡುವುದರಲ್ಲಿ ಹೆಚ್ಚು ಸಮಯ ಕಳೆದುಹೋಗುವುದ ರಿಂದ ಸಂಘಕಾರ್ಯಕ್ಕೆ ಬಿಡುವು ಸಿಗುವುದಿಲ್ಲವೆಂದು ಹೇಳುತ್ತಾರೆ. ಆದರೆ ನನ್ನ ಅನುಭವದ ಪ್ರಕಾರ ಇದು ಸಂಘಕಾರ್ಯ ಮಾಡಲು ಇಷ್ಟವಿಲ್ಲದವರು ಹೇಳುವ ನೆವವಾಗಿದೆ; ಏಕೆಂದರೆ ಮನಸ್ಸಿನಲ್ಲಿ ತೀವ್ರ ಇಚ್ಛೆ ಇದ್ದ ಪಕ್ಷದಲ್ಲಿ ಸಮಯವಲ್ಲದೆ ಧನವೂ ಸಹ ಸಿಗುತ್ತದೆ. ಕಾರ್ಯಶೀಲ ವ್ಯಕ್ತಿಗೆ ಹಣದ ಕೊರತೆ ಎಂದೂ ಆಗಲಾರದು. ಈ ಸಂಬಂಧದಲ್ಲಿ ನನ್ನ ಒಂದು ಅನುಭವವನ್ನು ಹೇಳು ತ್ತೇನೆ. ನನ್ನ ಪ್ರವಾಸ ಪೂರ್ಣವಾದನಂತರ ನಾನುಸಾಮಾನ್ಯವಾಗಿ ನಾಗಪುರದ ಲ್ಲಿರುತ್ತೇನೆ. ಆಗ ಸ್ವಲ್ಪ ಬಿಡುವು ದೊರೆತರೆ ನನ್ನ ತಾಯಿಯವರ ದರ್ಶನಕ್ಕಾಗಿ ಮನೆಗೆ ಹೋಗುತ್ತೇನೆ. ಒಂದು ಬಾರಿ ಹೀಗೆ ಮನೆಗೆ ಹೋದಾಗ ಕೆಲವು ಸ್ವಯಂಸೇವಕರೂ ಅಲ್ಲಿಗೆ ಬಂದರು. ಆಗ ಶ್ರೀ ಗುರುದಕ್ಷಿಣಾ ಸಮಯ ವಾಗಿದ್ದುದರಿಂದ, ಅವರು ಅದೇ ವಿಷಯವಾಗಿ ಮಾತುಕತೆ ನಡೆಸುತ್ತಿದ್ದರು. ನಾನಾದರೋ ಅವರ ಸಂಭಾಷಣೆಯನ್ನು ಕೇಳುತ್ತಾ ಕುಳಿತಿದ್ದೆ. ಮಾತಿನ ಮಧ್ಯದಲ್ಲಿ ಒಬ್ಬರು, "........ನಮ್ಮ ಶಾಖೆಯ ಗುರುದಕ್ಷಿಣೆಯನ್ನು ಹೆಚ್ಚಿಸ ಬೇಕು" ಎಂದರು. ಆಗ ಇನ್ನೊಬ್ಬ ಸ್ವಯಂಸೇವಕರು ಹೇಳಿದರು, "ಹೆಚ್ಚಿಸ

ಬೇಕೆಂಬುದೇನೋ ಸರಿ ಆದರೆ ಇದು ತುಟ್ಟಿಯ ದಿನಗಳು. ಆದ್ದರಿಂದ ಈಗ ಹೆಚ್ಚು ಮಾಡುವುದು ಕಷ್ಟ". ಇದಕ್ಕೆ ಮೊದಲು ಮಾತನಾಡಿದವರು ಉತ್ತರ ಕೊಡುವುದರಲ್ಲಿದ್ದರು. ಅಷ್ಟರಲ್ಲಿ ನಾನು ಎರಡನೆಯವರನ್ನು ಕುರಿತು "ನಾನು ಒಂದೆರಡು ಪ್ರಶ್ನೆ ಕೇಳುತ್ತೇನೆ. ನಂತರ ನೀವು ಹೇಳಬೇಕೆಂದಿರುವುದನ್ನು ಹೇಳಬಹುದು" ಎಂದೆ. ಅದಕ್ಕೆ ಅವರು ಒಪ್ಪಿದರು ನಂತರ ಅವರು ಸಿನಿಮಾಕ್ಕೆ ಖರ್ಚುಮಾಡುವ ಹಣದ ಬಗ್ಗೆ ನಾನು ಪ್ರಸ್ತಾಪಿಸಿದೆ. ಅವರು ಹೊಸದಾಗಿ ವಿವಾಹವಾದ ತಮ್ಮ ಪತ್ನಿಯೊಡನೆ ವಾರಕ್ಕೆರಡು ಬಾರಿ ಸಿನಿಮಾಕ್ಕೆ ಹೋಗುತ್ತಿದ್ದರು. ಮನೆಯಿಂದ ಸಿನಿಮಾ ಮಂದಿರ ದೂರವಿದ್ದುದರಿಂದ ಟಾಂಗಾದಲ್ಲಿ ಹೋಗಿ ಬರುತ್ತಿದ್ದರು. ಇವೆಲ್ಲಕ್ಕೂ ಒಂದು ವಾರದಲ್ಲಿ ಅವರಿಗೆ ಒಟ್ಟು ೮ರೂ. ಖರ್ಚಾಗುತ್ತಿತ್ತು. ಈ ವಿಷಯವು ನನಗೆ ಖಚಿತವಾಗಿ ಗೊತ್ತಿದ್ದುದರಿಂದ ಅವರೂ ಅದನ್ನು ಒಪ್ಪಿಕೊಂಡರು. ವಾರಕ್ಕೆ ಎಂಟು ರೂಪಾಯಿಗಳಂತೆ ವರ್ಷಕ್ಕೆ ಸುಮಾರು ೪೦೦ರೂ.ಗಳನ್ನು ಸಿನಿಮಾಕ್ಕಾಗಿ ಖರ್ಚು ಮಾಡುತ್ತಿದ್ದರು. ಆರೋಗ್ಯ, ಬುದ್ಧಿ, ದೃಷ್ಟಿ ಇವೆಲ್ಲಕ್ಕೂ ಅಪಾಯಕಾರಿಯಾದ ಹಾಗೂ ನಮ್ಮ ಸಂಸ್ಕೃತಿಗೆ ಸಲ್ಲದ ಸಿನಿಮಾದಂತಹ ವಿಷಯಕ್ಕಾಗಿ ಇಷ್ಟೊಂದು ಹಣವನ್ನು ಅಪವ್ಯಯ ಮಾಡಲು ನಾವು ಹಿಂದೆ ಮುಂದೆ ನೋಡುವುದಿಲ್ಲ. ಆದರೆ ಗುರುದಕ್ಷಿಣಾ ಹೆಚ್ಚಿಸುವಂತಹ ಶ್ರೇಷ್ಠ ವಿಷಯ ಬಂದರೆ 'ತುಟ್ಟಿಯ ದಿನ'ಗಳೆಂದು ಹೇಳುತ್ತೇವೆ. ಇದು ಪ್ರಾಮಾಣಿಕತೆಯ ಲಕ್ಷಣವಲ್ಲ. (ಜನರಿಗೆ ಸಿನಿಮಾಕ್ಕೆ ಹೋಗಬೇಡಿರೆಂದು ನಾನು ಹೇಳುವುದಿಲ್ಲ. ಎಲ್ಲವನ್ನೂ ತ್ಯಜಿಸಿದ ಮುಕ್ತ ಸನ್ಯಾಸಿಗಳನ್ನು ತಯಾರಿಸಲು ನಾವು ಹೊರಟಿಲ್ಲ. ಒಳ್ಳೆಯ ಮನರಂಜನೆ ದೃಷ್ಟಿಯಿಂದ ಚಲನಚಿತ್ರ ನೋಡುವುದು ಆಕ್ಷೇಪಣೀಯವಾಗಲಾರದು.)

ಮನಸ್ಸಿನಲ್ಲೆಂದೂ ಆತ್ಮವಂಚನೆಯ ಭಾವನೆ ಇರಬಾರದು. ಸಮಯವಿಲ್ಲ, ಪರೀಕ್ಷೆಯಿದೆ, ತೇರ್ಗಡೆಯಾದನಂತರ ಜೀವನಮಾರ್ಗ (Career) ನೋಡಿಕೊಳ್ಳುತ್ತೇನೆ........ ಇತ್ಯಾದಿ ಕಾರಣಗಳನ್ನು ಹೇಳುತ್ತಾರೆ. ಹಾಗೆ ನೋಡಿದರೆ ರಾಷ್ಟ್ರಸೇವೆಗಿಂತಲೂ ಶ್ರೇಷ್ಠವಾದ Career ಯಾವುದು?

ನಾನೂ ಸಹ ಕೆಲವು ಪರೀಕ್ಷೆಗಳನ್ನು 'ಪಾಸ್' ಮಾಡಿದ್ದೇನೆ. ಪರೀಕ್ಷೆಯಲ್ಲಿ 'ಪಾಸ್' ಆಗುವುದೆಂದರೆ ಪುಸ್ತಕದ ರಾಶಿಯ ಮಧ್ಯೆ ಕುಳಿತು ಓದುವುದೆಂದು ಅರ್ಥವಲ್ಲ. ಎಲ್ಲ ಅಭ್ಯಾಸವನ್ನೂ ಆನಂದದಿಂದಲೇ ಮಾಡಬಹುದು. ತಮ್ಮ ಸಮಯದ ಆಯೋಜನೆಯನ್ನು ಸರಿಯಾಗಿ ಮಾಡಿಕೊಂಡಿಲ್ಲದವರು ಮಾತ್ರ ಪರೀಕ್ಷೆ ಹಾಗೂ ಸಮಯದ ಕಾರಣ ಹೇಳುತ್ತಾರೆ.

## ಉದ್ಯೋಗಶೀಲರಿಗೆ ಸಮಯವಿದ್ದೇ ಇರುತ್ತದೆ

ಇಪ್ಪತ್ತನಾಲ್ಕು ಘಂಟೆಗಳಲ್ಲಿ ಅದೆಷ್ಟೋ ಸಮಯವನ್ನು ನಾವು ವ್ಯರ್ಥವಾಗಿ ಕಳೆಯುತ್ತೇವೆ. ಆದರೆ ಸಂಘದ ಕೆಲಸ ಮಾಡುವ ವಿಷಯ ಬಂದಾಗ "ನನಗೆ ಬಿಡುವೇ ಇಲ್ಲ" ಎನ್ನುತ್ತೇವೆ. ಇದು ಸರಿಯಲ್ಲ. ಉದ್ಯೋಗಿ ಪುರುಷನಿಗೆ ಎಂದೂ ಸಹ ಸಮಯದ ಅಭಾವ ತೋರುವುದಿಲ್ಲ. ಕೇವಲ ಸೋಮಾರಿಗೆ ಸಮಯದ ಕೊರತೆ ಕಾಣುತ್ತದೆ. ಈ ಬಗ್ಗೆ ಸಹ ನನ್ನದೊಂದು ಅನುಭವ ನೆನಪಿಗೆ ಬರುತ್ತದೆ. ನಾನು ೧೯೪೪ರಲ್ಲಿ ಪಂಜಾಬಿನಲ್ಲಿ ಪ್ರವಾಸ ಮಾಡುತ್ತಿದ್ದಾಗ ಮುಂಬೈನಗರದ ಸಂಘಚಾಲಕರು ಸ್ವರ್ಗಸ್ಥರಾದ ಸುದ್ದಿಯು ಬಂದಿತು. ಕೂಡಲೇ ನಾನು ಮುಂಬೈಗೆ ಹೋಗಿ ಅವರ ಮನೆಯವರಿಗೆ ಸಮಾಧಾನ ಹೇಳಿದೆ. ಮನೆಯಲ್ಲಿನ ಎಲ್ಲ ವ್ಯವಸ್ಥೆಗಳನ್ನೂ ಮಾಡಿದನಂತರ ಶಾಖಾವ್ಯವಸ್ಥೆ ಸಹ ಮಾಡಬೇಕಿತ್ತು. ಹೊಸ ಸಂಘಚಾಲಕರೊಬ್ಬರನ್ನು ನಿಯುಕ್ತಿಮಾಡಬೇಕಾಗಿದ್ದುದರಿಂದ ಅಲ್ಲಿನ ಕಾರ್ಯಕರ್ತರೊಡನೆ ವಿಚಾರ ವಿನಿಮಯ ಮಾಡಿದೆ. ಆ ಸ್ಥಾನಕ್ಕೆ ಯೋಗ್ಯರಾದ ನಾಲ್ಕಾರು ಹೆಸರುಗಳನ್ನು ಅವರು ಸೂಚಿಸಿದರು. ಅವರಲ್ಲಿ ಒಬ್ಬರ ಹೆಸರು ನನಗೆ ಹಿಡಿಸಿತು. ಅವರು ಹಿಂದೊಮ್ಮೆ ಸಂಘದ ಕಾರ್ಯಕ್ರಮವೊಂದರಲ್ಲಿ ಅಧ್ಯಕ್ಷರಾಗಿ ಬಂದಿದ್ದರು. ಅವರನ್ನು ಕಾಣಲು ಅವರ 'ಆಫೀಸ್' ಗೆ ಹೋದೆ. ಅವರೊಬ್ಬ ವಿಖ್ಯಾತ 'ಸಾಲಿಸಿಟರ್' ಆಗಿದ್ದರು. ಅವರನ್ನು ಕಾಣಲು ಅವರ ಕಛೇರಿಯಲ್ಲಿ ಅನೇಕ ಕಕ್ಷಿಗಾರರ ಮಧ್ಯೆ ನಾನೂ ಹೋಗಿ ಕುಳಿತುಕೊಂಡೆ. ಪ್ರಾರಂಭದ ಕೆಲವು ಕುಶಲಪ್ರಶ್ನೆಗಳಾದನಂತರ, ನಾನು ನೇರವಾಗಿ ಅವರೊಡನೆ "ತಮಗೆ ಸಂಘ ಕಾರ್ಯವೇನೂ ಹೊಸದಲ್ಲ. ಅದರ ಅವಶ್ಯಕತೆಯು ತಮಗೆ ತಿಳಿದೇ ಇದೆ.

ಆದ್ದರಿಂದ ಇಲ್ಲಿಯ ಶಾಖೆಯ ಅಧ್ಯಕ್ಷರಂತೆ ಇದ್ದು, ಸಂಘಕಾರ್ಯ ಬೆಳೆಸುವುದರಲ್ಲಿ ನೆರವಾಗಬೇಕೆಂದು ನಾನು ಆಶಿಸುತ್ತೇನೆ" ಎಂದು ಹೇಳಿದೆ. ಅದಕ್ಕವರು "ನೀವು ಹೇಳಿದ್ದನ್ನು ನಾನು ಒಪ್ಪುತ್ತೇನೆ. ಆದರೆ ಏನು ಮಾಡಲಿ ? ನನಗೆ ಪುರುಸೊತ್ತೇ ಸಿಗುವುದಿಲ್ಲ" ಎಂದು ಹೇಳಿದರು. ಅವರ ಮಾತು ಸತ್ಯವಾಗಿತ್ತು. ಅವರು ಬಹಳ ಹೆಚ್ಚು ಕೆಲಸವಿದ್ದ ಸಾಲಿಸಿಟರ್ ಆಗಿದ್ದರಲ್ಲದೆ, ಮುಂಬೈ ನಗರಸಭೆಯ ಸದಸ್ಯರೂ ಆಗಿದ್ದರು. ಅಲ್ಲದೆ ಗಣ್ಯ ವ್ಯಕ್ತಿಗಳಾಗಿದ್ದುದರಿಂದ ಅನೇಕ ಸಂಸ್ಥೆಗಳಲ್ಲಿ ನಾನಾರೀತಿಯ ಜವಾಬ್ದಾರಿ ಹೊಂದಿದ್ದರು ಮತ್ತು ಸದಾ ಕಾರ್ಯನಿರತರಾಗಿರುತ್ತಿದ್ದರು. ಆಗ ನಾನು ನನ್ನದೇ ಒಂದು ಸಿದ್ಧಾಂತವನ್ನು ಅವರ ಮುಂದಿಟ್ಟೆ: "ಹೆಚ್ಚು ಕೆಲಸವಿರುವ ಉದ್ಯೋಗಶೀಲರಿಗೆ ಸಮಯ ಇದ್ದೇ ಇರುತ್ತದೆ. ಆದರೆ ಸೋಮಾರಿಗೇ ಸಮಯಸಿಗುವುದಿಲ್ಲ" ಎಂದು ಹೇಳಿ, "ತಾವು ಆರು ತಿಂಗಳವರೆಗೆ ಸಂಘಚಾಲಕರಾಗಿ ಕೆಲಸಮಾಡಿ. ತಮಗೆ ಸಮಯ ಸಿಗುವ ಪಕ್ಷದಲ್ಲಿ ಅದನ್ನೇ ಮುಂದುವರಿಸಿಕೊಂಡುಹೋಗಿ. ಇಲ್ಲವಾದಲ್ಲಿ ಪತ್ರದ ಮೂಲಕ ನನಗೆ ತಿಳಿಸಿ. ನಾನು ನಂತರ ಈ ಜವಾಬ್ದಾರಿಯಿಂದ- ತಮ್ಮನ್ನು ಮುಕ್ತಗೊಳಿಸುತ್ತೇನೆ" ಎಂದೆ. ಅದಕ್ಕೆ ಅವರು ಒಪ್ಪಿಕೊಂಡರು; ಅದೇ ದಿನ ಸ್ವಯಂಸೇವಕರೆದುರು ಅವರನ್ನು ಸಂಘಚಾಲಕರೆಂದು ಘೋಷಿಸಲಾಯಿತು; ಆದರೆ ಆರುತಿಂಗಳಿಗೆಂದು ಹೇಳಲಿಲ್ಲ. ಏಕೆಂದರೆ, ಅದು ಕೇವಲ ನನ್ನ-ಅವರ ವಿಷಯುವಾಗಿತ್ತು. ಆರು ತಿಂಗಳು ಕಳೆದನಂತರ ಸಹ ಅವರಿಂದ ಸಂಘಕಾರ್ಯಮಾಡಲು ಸಮಯ ಸಿಗುತ್ತಿಲ್ಲವೆಂಬ ಪತ್ರ ಬರಲಿಲ್ಲ. ನಾನೂ ಆ ಬಗ್ಗೆ ಕೇಳಲಿಲ್ಲ. ಏಕೆಂದರೆ, ಮೊದಲು ತಿಳಿಸುವುದು ಅವರ ಕೆಲಸವಾಗಿತ್ತು. ಅಂಥ ಉದ್ಯೋಗಶೀಲ ಸಂಘಚಾಲಕರು ಈಶ್ವರನ ಕೃಪೆಯಿಂದಲೇ ಸಿಕ್ಕುತ್ತಾರೆ.

ಅವರು ಬಹಳ ಕಾರ್ಯನಿರತರಿದ್ದು ಪ್ರತಿನಿತ್ಯ ಪ್ರಭಾತ್, ಸಾಯಂ ಅಥವಾ ರಾತ್ರಿ ಯಾವುದಾದರೊಂದು ಶಾಖೆಗೆ ಹೋಗುತ್ತಿದ್ದರು. ಇದಲ್ಲದೆ ಸ್ವಯಂಸೇವಕರನ್ನು ಕಂಡು ಕಾರ್ಯವನ್ನು ವಿಸ್ತರಿಸುವ ವಿಷಯುವಾಗಿ ಮಾತುಕತೆ ನಡೆಸುತ್ತಿದ್ದರು. ಯಾವುದಾದರೂ ಖಾಲಿಜಾಗ ಕಣ್ಣಿಗೆ ಬಿದ್ದರೆ

ಅದು ಸಂಘಸ್ಥಾನಕ್ಕೆ ಏಕಾಗಬಾರದು ಎಂದು ಯೋಚಿಸುತ್ತಿದ್ದರು. ಅಲ್ಲಿಯ ಸುತ್ತಮುತ್ತಲಿನ ಜನರೊಡನೆ ಮಾತನಾಡಿ ಅಲ್ಲಿ ಹೊಸ ಶಾಖೆ ನಡೆಸಲು ಪ್ರಯತ್ನಿಸುತ್ತಿದ್ದರು. ಅವರ ಇತರ ಎಲ್ಲ ಕೆಲಸಗಳೂ ಮೊದಲಿನಂತೆಯೇ ನಡೆಯುತ್ತಿದ್ದವು. ಅದರೊಂದಿಗೇ ಸಂಘದ ಕೆಲಸವೂ ನಡೆಯುತ್ತಿತ್ತು. ಅವರ ನೇತೃತ್ವದಲ್ಲಿ ಕಾರ್ಯದ ವೃದ್ಧಿಯಾಯಿತು ; ಅನೇಕ ಹೊಸ ಶಾಖೆಗಳು ಪ್ರಾರಂಭವಾದವು. ಅವರಿಗೆ ಎಂದೂ ಸಹ ಸಮಯದ ಅಭಾವ ಕಂಡುಬರಲಿಲ್ಲ. ಅವರ ಮತ್ತೊಂದು ಗುಣ ನನ್ನನ್ನು ಅತ್ಯಂತ ಆಶ್ಚರ್ಯಗೊಳಿಸುತ್ತಿತ್ತು. ಅವರದೊಂದು ಕಾರ್ ಇತ್ತು, ಚೆನ್ನಾಗಿತ್ತು. ಆಗ ಯುದ್ಧದ ಸಮಯವಾದ್ದರಿಂದ ಪೆಟ್ರೋಲ್ ಸಿಗುತ್ತಿರಲಿಲ್ಲ. ನನ್ನ ಕಾರ್ಯಕ್ರಮಗಳು ನಾಲ್ಕೈದು ತಿಂಗಳ ಮೊದಲೇ ನಿಶ್ಚಯವಾಗುವುದರಿಂದ, ನಾನು ಮುಂಬೈಗೆ ಹೋಗುವುದು ಅವರಿಗೆ ಮೊದಲೇ ತಿಳಿಯುತ್ತಿತ್ತು. ಆದ್ದರಿಂದ ಅವರು ತಮಗೆ ದೊರೆಯುತ್ತಿದ್ದ ಪೆಟ್ರೋಲನ್ನೆಲ್ಲ ಕೂಡಿಡುತ್ತಿದ್ದರು. ತಮ್ಮ ಕೆಲಸಕ್ಕಾಗಿ ಬಸ್ಸು ಅಥವಾ ಟ್ರಾಂನಲ್ಲಿ ಹೋಗುತ್ತಿದ್ದರು. ನಾನು ಹೋದ ಕೂಡಲೇ ಕಾರ್ ಹಾಗೂ ಪೆಟ್ರೋಲ್ ನನ್ನ ವಶಕ್ಕೆ ಕೊಡುತ್ತಿದ್ದರು. ಎಲ್ಲದಕ್ಕೂ ಸ್ವತಃ ಶ್ರಮವಹಿಸುತ್ತಿದ್ದರು. ಅವರ ವಯಸ್ಸೇನು ಕಡಿಮೆಯಿತ್ತೆ ? ಅವರ ಹಿರಿಯ ಮಗ ನನಗಿಂತ ನಾಲ್ಕು ವರ್ಷ ದೊಡ್ಡವರು. ಇನ್ನು ಅವರ ವಯಸ್ಸೆಷ್ಟೆಂಬುದನ್ನು ನೀವೇ ಯೋಚಿಸಿ. ಅಂಥ ವೃದ್ಧಾಪ್ಯದಲ್ಲೂ ಈ ಎಲ್ಲ ಕೆಲಸಗಳನ್ನೂ ವಿಚಕ್ಷಣೆಯಿಂದ ನಿರ್ವಹಿಸುತ್ತಿದ್ದರು. ಉದ್ಯೋಗಶೀಲ ಮನುಷ್ಯನಿಗೆ, ಸಮಯದ ಅಭಾವವುಂಟಾಗುವುದೇ ಇಲ್ಲ. ಆದ್ದರಿಂದ 'ಸಮಯವಿಲ್ಲ' ಎಂಬ ಶಬ್ದವೆಂದಿಗೂ ನಮ್ಮ ಬಾಯಿಂದ ಬರಬಾರದು.

## ಅಗ್ರಭಾಗ ರಾಷ್ಟ್ರಕ್ಕೆ, ಪ್ರಸಾದ ನಮಗೆ

ನಾವು ರಾಷ್ಟ್ರಕಾರ್ಯ ಕೈಗೊಂಡಿದ್ದೇವೆ. ರಾಷ್ಟ್ರದ ಮೂಲಸಮಸ್ಯೆಯನ್ನು ಬಗೆಹರಿಸಲು ಸತ್ಸಂಸ್ಕಾರ ಪರಿಪೂರ್ಣವಾದ ಅತ್ಯಂತ ಸೂತ್ರಬದ್ಧ, ಸುಸಂಘಟಿತ ಸಾಮರ್ಥ್ಯದ ಆವಾಹನೆ ಮಾಡುವ ಸಂಕಲ್ಪ ಸಹ ಮಾಡಿ

ದ್ದೇವೆ. ಮಾತೃಭೂಮಿಯ ಅರ್ಚಕರು ನಾವು. ನಮ್ಮ ಜೀವನದ ಎಲ್ಲಾ ಶಕ್ತಿ, ಎಲ್ಲಾ ಚೈತನ್ಯದ ಅಗ್ರಭಾಗವೂ ಇದೇ ಕಾರ್ಯಕ್ಕೆ ಸಮರ್ಪಿತ ವಾಗಲಿ. ನೈವೇದ್ಯದ ರೂಪದಲ್ಲಿ ನಮ್ಮದೆಲ್ಲವನ್ನೂ ಅರ್ಪಿಸಿ, ಪ್ರಸಾದ ರೂಪದಲ್ಲಿ ಉಳಿಯುವುದು ಮಾತ್ರ ಪರಿವಾರಕ್ಕಿರಲಿ ಎಂಬ ದೃಢನಿಶ್ಚಯ ದಿಂದ ನಾವು ಮುಂದುವರಿಯಬೇಕು.

## ಮೊದಲು ನಮ್ಮ ಸುಧಾರಣೆ

ಕೆಲವರಲ್ಲಿ ಇನ್ನೊಂದು ವಿಚಾರವೂ ಏಳುತ್ತದೆ. ಕಾರ್ಯಕರ್ತರು ಸಾಕಷ್ಟು ಪರಿಶ್ರಮಿಸುತ್ತಾರೆ, ಆದರೆ ಫಲ ಸಿಕ್ಕುವುದಿಲ್ಲ. ಸಮಾಜ ಬಹಳ ನಿಷ್ಕ್ರಿಯವಾಗಿದೆ, ಕೆಟ್ಟುಹೋಗಿದೆ, ಅವರ ಬುದ್ಧಿ ಭ್ರಷ್ಟವಾಗಿದೆ- ಇತ್ಯಾದಿ ಸಮಾಜವನ್ನೇ ದೂಷಿಸುವವರೂ ಇರುತ್ತಾರೆ. ಆದರೆ ಸಮಾಜದ ಬಗ್ಗೆ ಆರೋಪಿಸುವ ದೋಷಗಳು ನಮಗೇ ಅನ್ವಯಿಸುತ್ತವೆ. ಸಮಾಜವನ್ನು ದೂಷಿಸುವುದೇ ಒಂದು ದೊಡ್ಡ ದೋಷ. ಕಾರ್ಯ ಅಪೂರ್ಣವಾಗುವುದಕ್ಕೂ ನಮ್ಮ ದೋಷವೇ ಕಾರಣ. ನಮ್ಮ ಜೀವನ ಕರ್ಮಕಠೋರವಾಗಬೇಕು. ನಮ್ಮನ್ನು ನಾವು ತಿದ್ದಿಕೊಳ್ಳುವವರೆಗೂ ಇತರರಿಗೆ ಹೇಳುವ ಅಧಿಕಾರವಿಲ್ಲ. ಸುಧಾರಣೆ ಮೊದಲು ನಮ್ಮಿಂದ ಪ್ರಾರಂಭವಾಗಬೇಕು. ನಮ್ಮನ್ನು ನಾವು ಸುಧಾರಣೆ ಮಾಡಿಕೊಂಡು, ಜೀವನದಲ್ಲಿ ಆಮೂಲಾಗ್ರ ಪರಿವರ್ತನೆ ಮಾಡಿ ಕೊಂಡು ಕಾರ್ಯ ನಡೆಸಬೇಕು.

ಆಳವಾಗಿ ಯೋಚಿಸಿದಲ್ಲಿ ನಾವು ಪ್ರತಿಯೊಬ್ಬರೂ ದೋಷಿಗಳಾಗಿದ್ದೇವೆ. ದೇಶದ ದೊಡ್ಡ ಭಾಗವು ನಮ್ಮ ಕೈಬಿಟ್ಟುಹೋಯಿತು. ರಾಷ್ಟ್ರಕ್ಕೆ ಸಂಕಟ ಗಳೊದಗಿದ ಸಮಯದಲ್ಲಿ ಜಾಗೃತರಿದ್ದು, ನಾವೆಲ್ಲರೂ ಭುಜಕ್ಕೆ ಭುಜ ಕೊಟ್ಟು, ಸ್ವಾಭಿಮಾನಯುಕ್ತರಾಗಿ, ದೇಶಸಂರಕ್ಷಣೆಗಾಗಿ ಎದ್ದುನಿಂತಿದ್ದರೆ, ಆಕ್ರಮಣ ನಡೆಸಲು ಯಾವ ಶಕ್ತಿಗೆ ಸಾಧ್ಯವಿರುತ್ತಿತ್ತು ? ಆದರೆ ಮೂಲ ದೋಷಿಗಳು ನಾವು. ಸಮಾಜದ ಅನ್ಯಾನ್ಯ ವ್ಯಕ್ತಿಗಳಲ್ಲಿ ನಮ್ಮಷ್ಟು ಜಾಗೃತಿಯಿರದಿದ್ದರೆ ಅವರನ್ನು ಸಂಘಟಿಸಿ ಆಪತ್ತಿನ ಸಮಯದಲ್ಲಿ ದೇಶದ

ರಕ್ಷಣೆಗಾಗಿ ನಾವೇಕೆ ಮುಂದೆ ಬರಲಿಲ್ಲ? ಎಂದ ಮೇಲೆ ರಾಷ್ಟ್ರದ ಏಕರೂಪದ ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬ ಭಾವನೆ ನಮ್ಮಲ್ಲಿ ಅಪೂರ್ಣವಾಗಿಯೇ ಉಳಿದಿದೆ. ನಮ್ಮಲ್ಲಿ ಈ ಭಾವನೆಯು ಪರಿಪೂರ್ಣವಾಗಿದ್ದರೆ, ಸಮಾಜದೊಡನೆ ವಿಚಾರವಿನಿಮಯ ಮಾಡಿಕೊಳ್ಳುತ್ತಾ ರಾಷ್ಟ್ರದ ರಕ್ಷಣೆಗಾಗಿ ದತ್ತಚಿತ್ತರಾಗಿ ಪ್ರಯತ್ನಿಸುತ್ತೇವೆ.

## ಹೃದಯ ಭಾವನಾಭರಿತವಾಗಲಿ

ನಮ್ಮ ಪೂರ್ವಜರು ಹಿಮಾಲಯದ ಸಂಪೂರ್ಣ ವಿಸ್ತಾರದಿಂದ ಹಿಡಿದು, ಸಣ್ಣ ದೊಡ್ಡ ಅನೇಕ ದ್ವೀಪಗಳಿಂದ ವೇಷ್ಟಿತವಾದ ಮಹಾಸಾಗರದ ವರೆಗಿನ ಭೂಮಿಯನ್ನು ಮಾತೃರೂಪದಲ್ಲಿ ಕಂಡು ಪೂಜಿಸುತ್ತಿದ್ದರು. ತನ್ನೆಲ್ಲ ಶಾಖೋಪಶಾಖೆಗಳು ಹಾಗೂ ತ್ರಿವಿಷ್ಟಪ (ಟಿಬೆಟ್) ವನ್ನು ಒಳಗೊಂಡ ಹಿಮಾಲಯ ಭಾರತಮಾತೆಯ ಶಿರದಂತಿದೆ. ಕವಿತಾ ಸಾಮ್ರಾಟ್ ಕಾಳಿದಾಸನು ಒಂದೆಡೆ ಹೀಗೆ ಹೇಳಿದ್ದಾನೆ – "ಅಸ್ತ್ಯುತ್ತರಸ್ಯಾಂ ದಿಶಿ ದೇವತಾತ್ಮಾ ಹಿಮಾಲಯೋ ನಾಮ ನಗಾಧಿರಾಜಃ" ಎಂದು. ಆದರೆ ಇಂದು ಬಹಳ ತಿಳಿದವರೆನಿಸಿಕೊಂಡಿರುವವರಿಗೂ ಈ ಸಂಪೂರ್ಣ ದೇಶದ ಕಲ್ಪನೆಯಿಲ್ಲ. 'ಹಿಂದು' ಶಬ್ದದ ವಿವರಣೆ ಕೊಡುತ್ತಾ, "ಆಸಿಂಧು ಸಿಂಧು ಪರ್ಯಂತ" ಎಂದು ಉಲ್ಲೇಖಿಸಿದ್ದಾರೆ. ಆದರೆ ಸಿಂಧೂ ನದಿಯ ಆಚೆಗಿರುವ ಗಾಂಧಾರ, ಹಿಮಾಲಯದ ಭಾಗಗಳು, ವಾಯುವ್ಯ ಗಡಿನಾಡು – ಇವೆಲ್ಲ ನಮ್ಮದಲ್ಲವೆ? ಈ ಭೂಮಿಯ ಈಗಿನ ಹರಕು-ಮುರಕು ಚಿತ್ರವನ್ನು ನೋಡಿ ನಮ್ಮ ಮನಸ್ಸಿಗೆ ನೋವಾಗುತ್ತದೆಯೇ? ಭಕ್ತಪ್ರಹ್ಲಾದನ ರಕ್ಷಣೆಗಾಗಿ ಭಗವಂತನು ನರಸಿಂಹಾವತಾರ ತಾಳಿ ಬಂದ ಸ್ಥಾನ – ಇಂದು ಅಪಭ್ರಂಶವಾಗಿ ಮುಲ್ತಾನ್ ಎಂದು ಕರೆಯಲ್ಪಡುವ ಮೂಲಸ್ಥಾನ – ನಮ್ಮಿಂದ ಅದೆಷ್ಟು ದೂರವಾಯಿತು? ಈ ವಿಚಾರ ನಮ್ಮ ಮನಸ್ಸಿನಲ್ಲಿ ಬರುತ್ತದೆಯೆ? ನಮ್ಮಿಂದ ಅಗಲಿಹೋಗಿರುವ ಕಾಶ್ಮೀರ, ಕೈಲಾಸ, ಪಂಜಾಬು, ಬಂಗಾಲಾ, ಗಾಂಧಾರಾ ಇತ್ಯಾದಿಗಳ ಬಗ್ಗೆ ಅನನ್ಯ ಸಾಧಾರಣ ನಿಷ್ಠೆ, ಉತ್ಕಟ ಭಕ್ತಿ ಇದೆಯೆ? ದೇಶದ ಈ ಛಿನ್ನವಿಚ್ಛಿನ್ನ ಸ್ವರೂಪ ಕಂಡು ಅಂತಃಕರಣಕ್ಕೆ

ಅತೀವ ವೇದನೆಯಾದಲ್ಲಿ ಮಾತ್ರ 'ನಾನು ಯೋಗ್ಯ ಸ್ವಯಂಸೇವಕ' ಎಂದು ತಿಳಿಯಬಹುದು. ಭಾವನಾರಹಿತ ಶುಷ್ಕ ಹೃದಯವೆಂದಿಗೂ ಪ್ರಭಾವಶಾಲಿಯಾಗಲಾರದು. ಅತ್ಯಂತ ಉತ್ಕಟ ಭಾವನೆ ನಮ್ಮ ಹೃದಯಗಳಲ್ಲಿ ಸ್ಥಿರಗೊಂಡಾಗ, ಅಪಮಾನದಿಂದಾದ ತೀವ್ರ ವ್ಯಥೆಯು ಪ್ರಖರ ನಿರ್ಧಾರಕ್ಕೆ ಪ್ರೇರಣೆ ನೀಡುತ್ತದೆ. ಆಗಲೇ ಮಾತೆಯ ಸಂಪೂರ್ಣ ಚಿತ್ರವನ್ನು ನಾವು ನಿರ್ಮಿಸಿ ನಿಲ್ಲಿಸಬಲ್ಲೆವು.

## ಏಕಾತ್ಮತೆಯ ಅರಿವು ಅಗತ್ಯ

ಈ ಸಂಪೂರ್ಣ, ವಿಶಾಲ ಹಿಂದೂಸಮಾಜ ನನ್ನದು; ಹಿಂದು ಎಲ್ಲೇ ಇರಲಿ ಆವನು ನನ್ನವನು; ಈ ಸಮಾಜದ ಅಂಗಪ್ರತ್ಯಂಗಗಳಲ್ಲಿ ನಾನಿದ್ದೇನೆ ಎಂಬ ಭಾವನೆ ಬೇಕು. ಸಮಾಜದ ಬಗ್ಗೆ ಇದು – ಏಕಾತ್ಮಕ ಸಮಾಜ – ಎಂದು ನೋಡುವ ಅಭೇದ ದೃಷ್ಟಿ ಬೇಕು. ನಾನು ಸ್ವತಃ ಸಂಘ ಕಾರ್ಯದ ನಿಮಿತ್ತ ದೇಶದಲ್ಲೆಲ್ಲ ಸಂಚರಿಸುತ್ತಿರುತ್ತೇನೆ. ಅನೇಕ ಪ್ರಕಾರದ ಭಿನ್ನತೆಗಳಲ್ಲಿಯೂ ಹೃದಯದ ಏಕತೆಯ ಪರಿಪೂರ್ಣ ಅನುಭವ ನನಗಾಗುತ್ತದೆ. ಎಲ್ಲಿ ಹೋದರೂ ನನ್ನದೇ ಮನೆಯಲ್ಲಿ ಇದ್ದೇನೆಂಬ ಅನುಭವವಾಗುತ್ತದೆ. ನನ್ನ ಪ್ರವಾಸದಲ್ಲೊಂದುಕಡೆ ನಾನು ಇಳಿದುಕೊಂಡಿದ್ದ ಮನೆಯ ಮುದುಕಿಯೊಬ್ಬರು ನನ್ನ ಕಾಲು ಮುಟ್ಟಿ ನಮಸ್ಕರಿಸಲು ಬಂದರು. 'ಬೇಡಿ' ಎಂದರೂ ಕೇಳಲಿಲ್ಲ. ಕೊನೆಗೆ ಕೈಹಿಡಿದು ಎತ್ತಿದೆ. ಆಗ ನನಗೆ ನಾಗಪುರದಲ್ಲಿ ಕೋಲೂರಿಕೊಂಡು ಓಡಾಡುವ ನನ್ನ ವೃದ್ಧ ತಾಯಿಯನ್ನು ಕೈಹಿಡಿದು ಕರೆದುಕೊಂಡು ಹೋಗುವ ಅನುಭವವಾಯಿತು. ಅಂತಃಕರಣದಲ್ಲಿ ಏಕತ್ವದ ಭಾವನೆಯಿದ್ದರೆ, ಪ್ರತ್ಯಕ್ಷ ವ್ಯವಹಾರದಲ್ಲಿ ಸಹ ಅದು ಕಂಡು ಬರುತ್ತದೆ. ಇದೇ ರೀತಿಯ ಏಕತ್ವದ ಅನುಭವ ನಮ್ಮೆಲ್ಲರಿಗೂ ಆಗುತ್ತದೆಯೆ ?

ಅನೇಕ ಬಾರಿ ಹೀಗಾಗುವುದು ಕಷ್ಟವಾಗುತ್ತದೆ. ಒಬ್ಬ ಸ್ವಯಂಸೇವಕ್ ಇದ್ದರು. 'ಇದ್ದರು' ಎಂದರೆ ಈಗ ಸಂಘದಲ್ಲಿಲ್ಲ ಎಂದರ್ಥ. ದೇವರ ಕೃಪೆಯಿಂದ ಈಗ ಸುಖವಾಗಿ ಸಂಸಾರಜೀವನ ನಡೆಸುತ್ತಿದ್ದಾರೆ.

ಕೇವಲ ನಮ್ಮ ಕಾರ್ಯದಲ್ಲಿಲ್ಲ – ಅಷ್ಟೆ. ಅವರು ಒಮ್ಮೆ ಶಾಖಾಕಾರ್ಯಕ್ಕಾಗಿ ಹಳ್ಳಿಗೆ ಹೋಗಬೇಕಿತ್ತು. ಆಗ ಹೇಳಿದರು, "ಅಲ್ಲಾದರೋ ಮಹಾ ಮೂರ್ಖಜನರಿರುತ್ತಾರೆ; ಅವರಲ್ಲಿ ಸಂಘಕಾರ್ಯಮಾಡಿ ಪ್ರಯೋಜನವೇನು ?" ಯಾರಿಂದ ಸಮಾಜದ ಪೋಷಣೆಯಾಗುತ್ತದೋ, ಅವರನ್ನು ಮೂರ್ಖರೆನ್ನುವುದು ಮನಸ್ಸಿನ ವಿಕೃತಿಯಾಗಿದೆ. ಹಾಗೆನ್ನುವವರಿಂದ ಸಂಘಕಾರ್ಯ ನಿಶ್ಚಯವಾಗಿಯೂ ಆಗಲಾರದು. ವಿಕೃತಿ ಸಮಾಜದಲ್ಲಿರಬಹುದು ; ಆದರೆ ಕಾರ್ಯಕರ್ತರು ಮನಸ್ಸನ್ನು ಶುದ್ಧವಾಗಿಟ್ಟುಕೊಂಡು, ಅಂತಃಕರಣದಲ್ಲಿ ಏಕಾತ್ಮತೆಯ ಭಾವನೆಯನ್ನು ಧರಿಸಬೇಕು.

ದೊಡ್ಡ ದೊಡ್ಡವರೆಂದು ಹೇಳಿಸಿಕೊಳ್ಳುವವರೂ ಏಕಾತ್ಮತೆಯನ್ನು ಮರೆತುಬಿಟ್ಟಿದ್ದಾರೆ. ನಮ್ಮದೇ ದೇಶದಲ್ಲಿ ದೂರದೂರದಲ್ಲಿ ವಾಸಮಾಡುವವರು ಬೇರೆ ಸ್ಥಳವನ್ನು ವಿದೇಶವೆಂದು ತಿಳಿಯುತ್ತಾರೆ. ಉತ್ತರದಲ್ಲಿ ವಾಸಿಸುವ ಮಹಾರಾಷ್ಟ್ರದ ಜನರು ತಾವು ವಿದೇಶದಲ್ಲಿದ್ದೇವೆಂದು ಹೇಳುತ್ತಾರೆ. ತಮ್ಮ ಊರಿಗೆ ಹೋಗುವ ಬಂಗಾಳದವರನ್ನು 'ಎಲ್ಲಿಗೆ ಹೋಗುತ್ತೀರಿ' ಎಂದು ಕೇಳಿದರೆ 'ನಮ್ಮ ದೇಶಕ್ಕೆ' ಎನ್ನುತ್ತಾರೆ. ಕೆಲವರು ಭಾಷೆ, ಪಂಥ, ಉಡಿಗೆ ತೊಡಿಗೆಗಳ ಆಧಾರದ ಮೇಲೆ ಪ್ರತ್ಯೇಕತೆಯ ಮಾತನ್ನು ಆಡುತ್ತಾರೆ. ಈ ಭೇದವೆಲ್ಲ ಕೇವಲ ಕೃತ್ರಿಮವಾಗಿ ಇದೆ. ಆದರಲ್ಲಿ ವ್ಯಾಪಕವಾಗಿರುವ ಏಕತ್ವದ ಆವಿಷ್ಕಾರ ಮಾಡಿಕೊಂಡು ಕಾರ್ಯವನ್ನು ಮಾಡಬೇಕು. 'ಸಂಪೂರ್ಣ ಭಾರತ ನಮ್ಮ ಮನೆ—ನಾವೆಲ್ಲ ಆದರ ಪರಿವಾರ' ಎಂಬ ಭಾವನೆಯನ್ನು ಸಮಾಜದ ಪ್ರತಿಯೊಬ್ಬ ವ್ಯಕ್ತಿಯಲ್ಲೂ ಜಾಗೃತಗೊಳಿಸಬೇಕು.

## ಇದು ಹಿಂದೂರಾಷ್ಟ್ರ

ಭಾರತದಲ್ಲಿಂದು ಅನೇಕ ಬಗೆಯ ಭ್ರಮೆ ಹರಡಿದೆ. ಕೆಲವರು ಕೇಳುತ್ತಾರೆ, "ಇಲ್ಲಿ ಹಿಂದುಗಳಲ್ಲದೆ ಅನ್ಯ ಸಮಾಜದವರೂ ಇದ್ದಾರೆ, ಅವರು ಇಲ್ಲಿಯೇ ಹುಟ್ಟಿ, ಇಲ್ಲಿಯೇ ವಾಸಿಸುತ್ತಿದ್ದಾರೆ. ಅಂದಮೇಲೆ ಅವರು ಪುತ್ರ

ರೂಪರಲ್ಲವೇ ?" ಇದಕ್ಕೆ ನಾವು ಸ್ಪಷ್ಟವಾಗಿ ಉತ್ತರಿಸುವುದು ಆವಶ್ಯಕ. ಏಕೆಂದರೆ, ವಿಶಾಲ ಮಾನವ ಸಮಾಜವನ್ನು ಬೇರೆ ಇಟ್ಟು ಹೇಗೆ ಜೀವನ ನಡೆಸಬಲ್ಲೆವು ? ಒಂದೇ ಮನೆಯಲ್ಲಿ ಮನೆಯವರು ಹಾಗೂ ಬೇರೆಯವರು ಇರುತ್ತಾರೆ. ಆ ಮನೆಯವರ ತಾಯಿಯೇ ಭೇದಭಾವವಿಲ್ಲದೆ ಬಡಿರುತ್ತಾಳೆ. ಆದರೆ ಊಟ ಮಾಡಿದವರೆಲ್ಲರೂ ಆ ತಾಯಿಯ ಮಕ್ಕಳಾಗಲಾರರು. ಹೊರಗಿನವರು ಆಕ್ರಮಣಕಾರಿಗಳಿರಬಹುದು; ಅತಿಥಿಗಳೂ ಆಗಿರಬಹುದು, ಆದರೆ ಇಲ್ಲಿ ಪುತ್ರರೂಪರಾಗಿ ಹಿಂದುಗಳು ಮಾತ್ರ ಇರಬಲ್ಲರು. ಪುತ್ರರೆಂದಿಗೂ ಮಾತೆಯನ್ನು ಕತ್ತರಿಸುವುದಿಲ್ಲ; ಮಾತೃಭೂಮಿಯ ರಾಷ್ಟ್ರೀಯ ಜೀವನವನ್ನು ನಾಶಗೈಯಲೆತ್ನಿಸುವುದಿಲ್ಲ.

ಇದು 'ಹಿಂದೂರಾಷ್ಟ್ರ' ಎಂದು ಗೊತ್ತಿದ್ದೂ, ಹಾಗೆ ಕರೆಯಲು ಅನೇಕರು ಹಿಂಜರಿಯುತ್ತಾರೆ. 'ಹಿಂದು' ಎನ್ನುವ ಶಬ್ದವನ್ನೇ ಹೇಳುವ ಆಗತ್ಯವಿಲ್ಲ, ಅದರ ಬದಲು ಬೇರೆ ಯಾವುದಾದರೂ ಶಬ್ದ ಉಪಯೋಗಿಸಬೇಕು ಎನ್ನುತ್ತಾರೆ. ಇದು ದುರ್ಬಲತೆಯ ಚಿಹ್ನೆ. ಈ ದುರ್ಬಲತೆ ನಮ್ಮ ಹೃದಯವನ್ನು ಸ್ಪರ್ಶಿಸಲು ಸಹ ಬಿಡಬಾರದು. ನಮ್ಮದು ಹಿಂದೂರಾಷ್ಟ್ರವೇ ಆಗಿದೆ. ಈ ಹಿಂದೂರಾಷ್ಟ್ರ ಪುನರಪಿ ವೈಭವ-ವಿಭೂಷಿತವಾಗಿ, ಪ್ರಭುತ್ವ ಪೂರ್ಣವಾಗಿ ಬಾಳುತ್ತದೆ. ಇದು ನಿಶ್ಚಿತ.

## ಸಂಘಟನೆಯೊಂದೇ ಮಾರ್ಗ

ಇಂದು ನಮ್ಮ ಸುತ್ತಲೂ ಅನೇಕ ಸಂಕಟಗಳಿದ್ದರೂ ಸಹ ಏನೂ ಇಲ್ಲವೆಂಬ ಭ್ರಮೆ ನಮ್ಮಲ್ಲಿದೆ. ಅನ್ಯ ಸಮಾಜಗಳು ಧರ್ಮದ ಹೆಸರಿನಲ್ಲಿ ರಾಜಕಾರಣ ನಡೆಸುತ್ತಿವೆ. ಮುಖಂಡರು ಸಹ ಇದಕ್ಕೆ ಮರುಳಾಗಿದ್ದಾರೆ. ಮುಸಲ್ಮಾನರು, ಕ್ರಿಶ್ಚಿಯನರು ಮುಂತಾದವರೆಲ್ಲ ವಿಶೇಷ ಹಕ್ಕುಗಳು, ಸವಲತ್ತುಗಳಿಗಾಗಿ ಒತ್ತಾಯಿಸುತ್ತಿದ್ದಾರೆ. ಆಕ್ರಮಣದ ಭಾವನೆ ಅವರಲ್ಲಿ ಇಂದಿಗೂ ಪೂರ್ಣ ಜಾಗೃತವಾಗಿದೆ. ಆದರೆ, ಮರಳಿನಲ್ಲಿ ತಲೆಯನ್ನು ಹುದುಗಿಸಿ, ಏನೂ ವಿಪತ್ತಿಲ್ಲವೆಂದು ಭ್ರಮಿಸುವ ಉಷ್ಟ್ರಪಕ್ಷಿಯ ಸ್ಥಿತಿ ನಮ್ಮದಾಗಿದೆ. ಹಿಂದೆ ಆಕ್ರಮಣಗಳನ್ನೆದುರಿಸಲು ಸುಸಂಘಟಿತ ಸ್ಥಿತಿಯಿತ್ತು.

ಅಂಥದೇ ಸ್ಥಿತಿ ಇಂದು ನಿರ್ಮಾಣವಾದರೆ ಮಾತ್ರ ಎಂಥ ಆಕ್ರಮಣ ವನ್ನಾದರೂ ತಡೆಯಬಲ್ಲೆವು. ದೇಶದ ರಕ್ಷಣೆಗೆ ಸಂಘಟನೆಯೊಂದೇ ಮಾರ್ಗ. ಬೇರೆ ಯಾವ ಮಾರ್ಗವೂ ಇಲ್ಲ.

## ಆತ್ಮವಿಶ್ವಾಸವಿರಲಿ

ಜನತೆಗೆ ನಾವು ಸಂಘಟನೆಯ ಸಿದ್ಧಾಂತವನ್ನು ಆತ್ಮವಿಶ್ವಾಸದಿಂದ ಹೇಳುವಂತಿರಬೇಕು. ಆತ್ಮವಿಶ್ವಾಸವಿಲ್ಲದೆ ಹೇಳಿದ ಮಾತಿಗೆ ಬೆಲೆಯಿಲ್ಲ; ಯಾರೂ ಅದನ್ನು ನಂಬುವುದಿಲ್ಲ. ಶಬ್ದಗಳ ಹಿಂದೆ ಭಾವನೆಯ ಉತ್ಕಟತೆ ಯಿಂದ ಅದಕ್ಕೆ ಸನ್ಮಾನ ಸಿಗುತ್ತದೆ; ನಮ್ಮ ಮಾತು ಸಬಲವಾಗಿ, ಜೀವಂತ ವಾಗಿ ಬೇರೆಯವರ ಹೃದಯಕ್ಕೆ ಮುಟ್ಟುತ್ತದೆ. ಆಗ ನಾವು ಹೇಳಿದಂತೆ ಮಾಡುತ್ತಾರೆ. ಎಲ್ಲ ಭೇದಗಳನ್ನೂ ದಾಟಿ ಸಮಾಜವನ್ನು ಉತ್ಕಟವಾಗಿ ಪ್ರೀತಿಸುವ ಅತೀವ ಆತ್ಮೀಯತೆಯ ಭಾವನೆ ನಮ್ಮಲ್ಲಿದ್ದರೆ ಆಗ ನಮ್ಮ ಶಬ್ದಗಳಲ್ಲಿ ಸಾಮರ್ಥ್ಯ ತುಂಬಿಕೊಳ್ಳುತ್ತದೆ.

## ಆಚರಣೆಯೇ ತಪಸ್ಯೆ

ನಮ್ಮಲ್ಲಿ ಆತ್ಮವಿಶ್ವಾಸದ ಸಂಚಾರವಾಗಲು ನಮ್ಮ ಕಾರ್ಯಪದ್ಧತಿಯ ಪೂರ್ಣಪರಿಪಾಲನೆ ಅತ್ಯಂತ ಅಗತ್ಯ. ಸಣ್ಣ-ಪುಟ್ಟ ವಿಷಯಗಳಿಂದ ಹಿಡಿದು ಜೀವನವಿಡೀ ಅನುಶಾಸನವನ್ನು ಒಂದು ತಪಸ್ಸಿನಂತೆ ಆಚರಿಸುವ ವಿಚಾರ ನಮ್ಮ ಮೈಗೂಡಬೇಕು. ಕೇವಲ ನಾವು ಬಾಯಿನಿಂದ ಹೇಳಿದರೆ ಯಾರೂ ಅದರಂತೆ ನಡೆಯುವುದಿಲ್ಲ. ನಾವು ಅನುಶಾಸನ ತಪ್ಪಿದರೆ, ನಮ್ಮ ಕಾರ್ಯ ದಲ್ಲಿ ದತ್ತಚಿತ್ತರಾಗಿಲ್ಲವೆಂಬುದು ಇತರರಿಗೆ ಗೊತ್ತಾದರೆ "ನೀನೇ ಸರಿಯಿಲ್ಲ, ನನಗೇಕೆ ಹೇಳುವೆ?" ಎನ್ನುತ್ತಾರೆ. ನಮ್ಮ ಆಚರಣೆಯೇ ಇತರರ ಮೇಲೆ ಪರಿಣಾಮ ಬೀರುತ್ತದೆ. ಈ ಆಚರಣೆಯ ಪ್ರಭಾವದಿಂದಲೇ ಇತರರನ್ನು ಶಾಖೆಗೆ ಕರೆತರಲು ಸಾಧ್ಯ. ವ್ರತನಿಷ್ಠ, ಅನುಶಾಸನಪೂರ್ಣ ಜೀವನ ನಮಗೆ ಅದಮ್ಯ ಕಾರ್ಯೋತ್ಸಾಹ ಹಾಗೂ ಅಚಲ ಆತ್ಮವಿಶ್ವಾಸವನ್ನು ತಂದು ಕೊಡುತ್ತದೆ; ಎಲ್ಲವನ್ನೂ ಗೆಲ್ಲಬಲ್ಲೆವೆಂಬ ನಂಬಿಕೆ ನಮಗಾಗುತ್ತದೆ.

## ಪ್ರಬಲ ಸಾಮರ್ಥ್ಯ ನಿರ್ಮಿಸೋಣ

ಸಂಘಕಾರ್ಯ ನಮ್ಮ ಜೀವನದ ಕಾರ್ಯವಾಗಿದೆ. ಅದಕ್ಕನುರೂಪ ವಾಗಿ ನಮ್ಮನ್ನು ನಾವು ಪರಿವರ್ತಿಸಿಕೊಳ್ಳೋಣ. ಆದರಿಂದಲೇ ಕಾರ್ಯ ವರ್ಧಿಸುತ್ತದೆ. ಪರಿಸ್ಥಿತಿಯಾದರೋ ನಮಗೆ ಅನುಕೂಲವಾಗಿಯೇ ಇದೆ. ನಮ್ಮ ಕಾರ್ಯದ ಬಗ್ಗೆ ಜನತೆಯಲ್ಲಿ ಕುತೂಹಲ ಹಾಗೂ ಆಕರ್ಷಣೆ ನಿರ್ಮಾಣವಾಗಿದೆ. ಸಂಘವನ್ನು ಸಾಂಪ್ರದಾಯಿಕವೆನ್ನುವವರೂ ಸಹ ಕಡೆಗೆ ಸಂಘದ ಆಧಾರವನ್ನೇ ಅವಲಂಬಿಸಬೇಕಾಗುತ್ತದೆ. ಕೆಲವೇ ದಿನಗಳ ಹಿಂದೆ ಸಂಘವನ್ನು 'ಕೋಮುವಾರು' ಎನ್ನುತ್ತಿದ್ದ ಪ್ರಧಾನಿಗಳು ಸಹ 'ದಂಡದಿಂದ ಲಾದರೂ ದೇಶದ ರಕ್ಷಣೆಮಾಡುವೆ' ಎಂದಿದ್ದಾರೆ. ಎಲ್ಲರಲ್ಲೂ ಒಳಗೊಳಗೇ ಸಂಘದ್ದೇ ಭಾವನೆ ಉಂಟಾಗುತ್ತಿದೆ. ಅನುಕೂಲತೆಗಳೆಲ್ಲದರ ಪೂರ್ಣ ಉಪಯೋಗಪಡೆದುಕೊಂಡು ಕಾರ್ಯ ಮುಂದವರಿಸದಿದ್ದರೆ ದೋಷ ನಮ್ಮದೇ ಆಗುತ್ತದೆ. ಸಮಾಜ ಅಥವಾ ಪರಿಸ್ಥಿತಿಯಲ್ಲಿ ದೋಷವಿಲ್ಲ. ಆ ದೋಷ ನಮ್ಮ ಮೇಲೂ ಬಾರದಂತೆ ಕಾರ್ಯಮಾಡುವ ನಿಶ್ಚಯವನ್ನು ಮಾಡೋಣ. ನಮ್ಮ ಮೇಲೆ ಆಕ್ರಮಣ ಮಾಡುವವರು ಯಾರೂ ಜೀವಸಹಿತ ಹಿಂದಿರು ಗಲು ಬಿಡಬಾರದು; ಅಂತಹ ಪ್ರಖರ ಶಕ್ತಿಯನ್ನು, ಪ್ರಬಲ ಚೈತನ್ಯವನ್ನು ನಿರ್ಮಿಸೋಣ. ಇಂದು ಕಾಣುತ್ತಿರುವ ಕಷ್ಟಗಳಷ್ಟೇ ಅಲ್ಲ, ಮುಂಬರುವ ಸಂಕಟಗಳನ್ನು ಸಹ ಎದುರಿಸಬಲ್ಲ ಸಾಮರ್ಥ್ಯವನ್ನು ನಿರ್ಮಾಣಮಾಡೋಣ. ಸಂಪೂರ್ಣ ಶ್ರದ್ಧೆಯಿಂದ, ಸಂಪೂರ್ಣ ಶಕ್ತಿಯನ್ನು ವಿನಿಯೋಗಿಸಿ, ಅಹೋ ರಾತ್ರಿ ಪರಿಶ್ರಮಿಸುವ ಅಗತ್ಯವಿದೆ. ಪ್ರಖರ ಧ್ಯೇಯವಾದದಿಂದ ಕೂಡಿದ ವಿಸ್ತೃತ, ವಿರಾಟ, ಅದಮ್ಯ, ಅಜೇಯ ಶಕ್ತಿಯ ನಿರ್ಮಾಣವನ್ನು ದೈನಂದಿನ ಶಾಖಾರೂಪದಲ್ಲಿ ಮಾಡೋಣ.

---

